# ಅನುಷ್ಠಾನ ವೇದಾಂತ

ಸ್ವಾಮಿ ವಿವೇಕಾನಂದ





ಶ್ರೀ ರಾಮಕೃಷ್ಣ ಆಶ್ರಮ
ಮೈಸೂರು.

[ಬೆಲೆ: ರೂ. ೧-೦-೦

# ಅನುಷ್ಠಾನ ವೇದಾಂತ

ಸ್ವಾಮಿ ವಿವೇಕಾನಂದ



ಶ್ರೀ ರಾಮಕೃಷ್ಣ ಆಶ್ರಮ
ಮೈಸೂರು.

[ಬೆಲೆ: ರೂ. ೧-೦-೦

# ಅನುಷ್ಠಾನ ವೇದಾಂತ

---

## ಅಧ್ಯಾಯ ೧

ವೇದಾಂತ ತತ್ತ್ವದ ಅನುಷ್ಠಾನದ ವಿಚಾರವಾಗಿ ಸ್ವಲ್ಪ ಮಾತನಾಡ ಬೇಕೆಂದು ನನ್ನನ್ನು ಕೇಳಿಕೊಂಡಿರುವರು. ನಾನು ನಿಮಗೆ ಹೇಳಿದಂತೆ ಸಿದ್ಧಾಂತ ವೇನೋ ಬಹಳ ಚೆನ್ನಾಗಿದೆ. ಆದರೆ ಅದನ್ನು ನಮ್ಮ ಅನುಷ್ಠಾನಕ್ಕೆ ಹೇಗೆ ತರು ವುದು? ಅದನ್ನು ಅನುಷ್ಠಾನಕ್ಕೆ ತರಲು ಸ್ವಲ್ಪವೂ ಸಾಧ್ಯವಿಲ್ಲದೇ ಇದ್ದರೆ ಯಾವ ಸಿದ್ಧಾಂತದಿಂದಲೂ ಏನೂ ಪ್ರಯೋಜನವಿಲ್ಲ. ಅದು ಒಂದು ಕೇವಲ ಬುದ್ಧಿ ವಂತಿಕೆಯ ಕಸರತ್ತಾಗಬಹುದು. ಆದಕಾರಣ ವೇದಾಂತ ಧಾರ್ಮಿಕ ದೃಷ್ಟಿ ಯಿಂದ ಸಂಪೂರ್ಣ ಅನುಷ್ಠಾನ ಸಾಧ್ಯವಾಗಬೇಕು. ನಮ್ಮ ಜೀವನದ ಪ್ರತಿ ಯೊಂದು ಕಾರ್ಯಕ್ಷೇತ್ರದಲ್ಲಿಯೂ, ಅದನ್ನು ಅನುಷ್ಠಾನಕ್ಕೆ ತರಲು ನಮಗೆ ಸಾಧ್ಯ ವಾಗಬೇಕು. ಇದೊಂದೇ ಅಲ್ಲ, ಆಧ್ಯಾತ್ಮಿಕ ಜೀವನ ಮತ್ತು ವ್ಯವಹಾರಿಕ ಜೀವನಕ್ಕೆ ಇರುವ ಕಾಲ್ಪನಿಕ ಭೇದಭಾವ ಮಾಯವಾಗಬೇಕು. ಏಕೆಂದರೆ ವೇದಾಂತ ಏಕತ್ವವನ್ನು, ಎಲ್ಲೆಡೆಯಲ್ಲಿಯೂ ಇರುವ ಏಕ ಜೀವನವನ್ನು ಉಪ ದೇಶಿಸುತ್ತದೆ. ಧರ್ಮದ ಆದರ್ಶ ನಮ್ಮ ಜೀವನದ ಎಲ್ಲಾ ಕಾರ್ಯಕ್ಷೇತ್ರಗಳನ್ನು ಆವರಿಸಬೇಕು; ನಮ್ಮ ಆಲೋಚನೆಗಳೆಲ್ಲವನ್ನು ಅವು ಪ್ರವೇಶಿಸಬೇಕು; ಹೆಚ್ಚು ಹೆಚ್ಚಾಗಿ ಅನುಷ್ಠಾನದಲ್ಲಿ ಬಳಕೆಗೆ ಬರಬೇಕು. ನಾನು ಮುಂದುವರಿದಂತೆ ಕ್ರಮೇಣ ಇವುಗಳ ಅನುಷ್ಠಾನತೆಯನ್ನು ತೆಗೆದುಕೊಳ್ಳುತ್ತೇನೆ. ಆದರೆ ಈ ಕೆಲವು ಮೂಲ ಉಪನ್ಯಾಸಗಳು ಮೊದಲು ಬೇಕಾಗಿವೆ. ಆದಕಾರಣ ಮೊದಲು ಸಿದ್ಧಾಂತವನ್ನು ತಿಳಿದುಕೊಂಡು, ನಂತರ ಅವು ಕಾನನಗಳಿಂದ ಹಿಡಿದು, ನಗರದ ಗಡಿಬಿಡಿಯ ದಾರಿಯಲ್ಲಿಯೂ ಕೂಡ ಹೇಗೆ ಅನುಷ್ಠಾನಕ್ಕೆ ಬಂದಿವೆ ಎಂಬುದನ್ನು ತಿಳಿದುಕೊಳ್ಳೋಣ. ಇವುಗಳಲ್ಲಿ ನಮಗೆ ಕಾಣುವ ಒಂದು ವಿಶೇಷ ಸಂಗತಿ ಏನೆಂದರೆ, ಇಲ್ಲಿಯ ಅನೇಕ ಮಹದಾಲೋಚನೆಗಳು ಕಾನನಾಂತರಗಳಲ್ಲಿ ವಿರಾಮದಿಂದ ಬಾಳುತ್ತಿದ್ದ ಮುನಿವರರಿಂದ ಬಂದವುಗಳಲ್ಲ. ನಾವು ಯಾರನ್ನು ಸ್ವಲ್ಪವೂ ವಿರಾಮವಿಲ್ಲದೆ ಅವಿಶ್ರಾಂತರಾಗಿ ದುಡಿಯುತ್ತಿದ್ದರು ಎಂದು ತಿಳಿಯು ತ್ತೇವೆಯೋ, ಅಂತಹ ರಾಜ್ಯಭಾರ ಮಾಡುತ್ತಿದ್ದ ಆಳರಸರಿಂದ ಬಂದಿವೆ.

# ಅನುಷ್ಠಾನ ವೇದಾಂತ

---

## ಅಧ್ಯಾಯ ೧

ವೇದಾಂತ ತತ್ತ್ವದ ಅನುಷ್ಠಾನದ ವಿಚಾರವಾಗಿ ಸ್ವಲ್ಪ ಮಾತನಾಡ ಬೇಕೆಂದು ನನ್ನನ್ನು ಕೇಳಿಕೊಂಡಿರುವರು. ನಾನು ನಿಮಗೆ ಹೇಳಿದಂತೆ ಸಿದ್ಧಾಂತ ವೇನೋ ಬಹಳ ಚೆನ್ನಾಗಿದೆ. ಆದರೆ ಅದನ್ನು ನಮ್ಮ ಅನುಷ್ಠಾನಕ್ಕೆ ಹೇಗೆ ತರು ವುದು? ಅದನ್ನು ಅನುಷ್ಠಾನಕ್ಕೆ ತರಲು ಸ್ವಲ್ಪವೂ ಸಾಧ್ಯವಿಲ್ಲದೇ ಇದ್ದರೆ ಯಾವ ಸಿದ್ಧಾಂತದಿಂದಲೂ ಏನೂ ಪ್ರಯೋಜನವಿಲ್ಲ. ಅದು ಒಂದು ಕೇವಲ ಬುದ್ಧಿ ವಂತಿಕೆಯ ಕಸರತ್ತಾಗಬಹುದು. ಆದಕಾರಣ ವೇದಾಂತ ಧಾರ್ಮಿಕ ದೃಷ್ಟಿ ಯಿಂದ ಸಂಪೂರ್ಣ ಅನುಷ್ಠಾನ ಸಾಧ್ಯವಾಗಬೇಕು. ನಮ್ಮ ಜೀವನದ ಪ್ರತಿ ಯೊಂದು ಕಾರ್ಯಕ್ಷೇತ್ರದಲ್ಲಿಯೂ, ಅದನ್ನು ಅನುಷ್ಠಾನಕ್ಕೆ ತರಲು ನಮಗೆ ಸಾಧ್ಯ ವಾಗಬೇಕು. ಇದೊಂದೇ ಅಲ್ಲ, ಅಧ್ಯಾತ್ಮಿಕ ಜೀವನ ಮತ್ತು ವ್ಯವಹಾರಿಕ ಜೀವನಕ್ಕೆ ಇರುವ ಕಾಲ್ಪನಿಕ ಭೇದಭಾವ ಮಾಯವಾಗಬೇಕು. ಏಕೆಂದರೆ ವೇದಾಂತ ಏಕತ್ವವನ್ನು, ಎಲ್ಲೆಡೆಯಲ್ಲಿಯೂ ಇರುವ ಏಕ ಜೀವನವನ್ನು ಉಪ ದೇಶಿಸುತ್ತದೆ. ಧರ್ಮದ ಆದರ್ಶ ನಮ್ಮ ಜೀವನದ ಎಲ್ಲಾ ಕಾರ್ಯಕ್ಷೇತ್ರಗಳನ್ನು ಆವರಿಸಬೇಕು; ನಮ್ಮ ಆಲೋಚನೆಗಳೆಲ್ಲವನ್ನು ಅವು ಪ್ರವೇಶಿಸಬೇಕು; ಹೆಚ್ಚು ಹೆಚ್ಚಾಗಿ ಅನುಷ್ಠಾನದಲ್ಲಿ ಬಳಕೆಗೆ ಬರಬೇಕು. ನಾನು ಮುಂದುವರಿದಂತೆ ಕ್ರಮೇಣ ಇವುಗಳ ಅನುಷ್ಠಾನತೆಯನ್ನು ತೆಗೆದುಕೊಳ್ಳುತ್ತೇನೆ. ಆದರೆ ಈ ಕೆಲವು ಮೂಲ ಉಪನ್ಯಾಸಗಳು ಮೊದಲು ಬೇಕಾಗಿವೆ. ಆದಕಾರಣ ಮೊದಲು ಸಿದ್ಧಾಂತವನ್ನು ತಿಳಿದುಕೊಂಡು, ನಂತರ ಅವು ಕಾನನಗಳಿಂದ ಹಿಡಿದು, ನಗರದ ಗಡಿಬಿಡಿಯ ದಾರಿಯಲ್ಲಿಯೂ ಕೂಡ ಹೇಗೆ ಅನುಷ್ಠಾನಕ್ಕೆ ಬಂದಿವೆ ಎಂಬುದನ್ನು ತಿಳಿದುಕೊಳ್ಳೋಣ. ಇವುಗಳಲ್ಲಿ ನಮಗೆ ಕಾಣುವ ಒಂದು ವಿಶೇಷ ಸಂಗತಿ ಏನೆಂದರೆ, ಇಲ್ಲಿಯ ಅನೇಕ ಮಹದಾಲೋಚನೆಗಳು ಕಾನನಾಂತರಗಳಲ್ಲಿ ವಿರಾಮದಿಂದ ಬಾಳುತ್ತಿದ್ದ ಮುನಿವರರಿಂದ ಬಂದವುಗಳಲ್ಲ. ನಾವು ಯಾರನ್ನು ಸ್ವಲ್ಪವೂ ವಿರಾಮವಿಲ್ಲದೆ ಅವಿಶ್ರಾಂತರಾಗಿ ದುಡಿಯುತ್ತಿದ್ದರು ಎಂದು ತಿಳಿಯು ತ್ತೇವೆಯೋ, ಅಂತಹ ರಾಜ್ಯಭಾರ ಮಾಡುತ್ತಿದ್ದ ಆಳರಸರಿಂದ ಬಂದಿವೆ.

ಶ್ವೇತಕೇತು ಅರುಣಿ ಋಷಿಯ ಮಗ. ಬಹುಶಃ ಅವನು ಕಾಡಿನಲ್ಲಿ ಹುಟ್ಟಿಬೆಳೆದವನು. ಪಾಂಚಾಲ ದೇಶಕ್ಕೆ ಹೋಗಿ ಪ್ರವಹನ ಜೈವಲಿ ಎಂಬ ರಾಜನ ಆಸ್ಥಾನದಲ್ಲಿ ಕಾಣಿಸಿಕೊಂಡನು. ರಾಜ, "ಮರಣ ಕಾಲದಲ್ಲಿ ಜೀವಿಗಳು ಹೇಗೆ ಹೋಗುತ್ತವೆ ಎಂಬುದು ಗೊತ್ತೆ?" ಎಂದು ಕೇಳಿದನು. ಅದಕ್ಕೆ "ಇಲ್ಲ ಮಹಾಶಯರೆ" ಎಂದು ಉತ್ತರ ಕೊಟ್ಟನು. ನಂತರ ರಾಜ, "ಅವರು ಪುನಃ ಹೇಗೆ ಹಿಂತಿರುಗುತ್ತಾರೆ ಎಂಬದು ಗೊತ್ತಿದೆಯೆ?" ಎಂದನು. ಅದಕ್ಕೂ ಇಲ್ಲವೆಂದು ಉತ್ತರಕೊಟ್ಟನು. "ದೇವಯಾನ ಪಿತೃಯಾನದ ಮಾರ್ಗ ಗೊತ್ತಿದೆಯೆ?" ಎಂದು ಪ್ರಶ್ನಿಸಿದನು. ಅದಕ್ಕೂ ಇಲ್ಲ ಎಂದು ಹೇಳಿದನು. ನಂತರ ರಾಜನು ಬೇರೆ ಪ್ರಶ್ನೆಗಳನ್ನು ಕೇಳಿದನು. ಶ್ವೇತಕೇತುಗೆ ಉತ್ತರ ಕೊಡಲು ಆಗಲಿಲ್ಲ. ಆದಕಾರಣ ದೊರೆ ಆತನಿಗೆ ನಿನಗೇನೂ ಗೊತ್ತಿಲ್ಲವೆಂದು ಹೇಳಿದನು. ಹುಡುಗನು ತಂದೆಯ ಸಮೀಪಕ್ಕೆ ಹಿಂತಿರುಗಿದನು. ತಂದೆಯು ಇಂತಹ ಪ್ರಶ್ನೆಗಳಿಗೆ ತಾನೆ ಉತ್ತರ ಕೊಡಲು ಆಗುತ್ತಿರಲಿಲ್ಲವೆಂದು ಒಪ್ಪಿಕೊಂಡನು. ಇಂತಹ ಪ್ರಶ್ನೆಗಳಿಗೆ ಉತ್ತರವನ್ನು ಹೇಳಬಾರದೆಂದು ಅಲ್ಲ, ಅಥವಾ ತನ್ನ ಹುಡುಗನಿಗೆ ಇಂತಹ ಪ್ರಶ್ನೆಗಳಿಗೆ ಉತ್ತರವನ್ನು ಹೇಳಿಕೊಡಬಾರದೆಂದೂ ಮನಸ್ಸೂ ಇರಲಿಲ್ಲವೆಂದಲ್ಲ ಆದರೆ ಅವನಿಗೇ ಈ ವಿಷಯ ತಿಳಿದಿರಲಿಲ್ಲ. ಆದಕಾರಣ ಶ್ವೇತಕೇತು ತಂದೆಯೊಂದಿಗೆ ರಾಜನಲ್ಲಿಗೆ ಮರಳಿ ಹೋಗಿ ಇಬ್ಬರೂ, ತಮಗೆ ಆ ರಹಸ್ಯವನ್ನು ಹೇಳಿಕೊಡಬೇಕೆಂದು ಕೇಳಿಕೊಂಡರು. ಅದಕ್ಕೆ ರಾಜ, "ಇದುವರೆವಿಗೂ, ಈ ರಹಸ್ಯ ರಾಜರಿಗೆ ಮಾತ್ರ ತಿಳಿದಿತ್ತು; ಬ್ರಾಹ್ಮಣರಿಗೆ ತಿಳಿದಿರಲಿಲ್ಲ" ಎಂದು ಹೇಳಿದನು. ಆದರೂ ಆತನು ಯಾವುದನ್ನು ಅವರು ತಿಳಿಯಬೇಕೆಂದು ಅಪೇಕ್ಷಿಸಿದರೋ, ಅದನ್ನು ಕಲಿಸಲು ಒಪ್ಪಿಕೊಂಡನು. ಅನೇಕ ಉಪನಿಷತ್ತುಗಳಲ್ಲಿ ಈ ವೇದಾಂತ ವಿಚಾರಗಳು, ಕೇವಲ ಕಾಡಿನಲ್ಲಿ ಮಾಡಿದ ತಪಸ್ಸಿನ ಫಲಮಾತ್ರವಲ್ಲವೆನ್ನುವುದು ನಮಗೆ ತೋರುತ್ತದೆ. ಅದರಲ್ಲಿ, ಬಹಳ ಮುಖ್ಯವಾದ ಭಾಗಗಳನ್ನು ಆಲೋಚನೆಮಾಡಿ ಅದನ್ನು ಬೋಧಿಸಿದವರು, ಜೀವನದ ಅನುದಿನದ ಕಾರ್ಯಕ್ರಮದಲ್ಲಿ ಸಿಕ್ಕಿ ಬಹಳ ಕಷ್ಟಪಟ್ಟು ಕೆಲಸ ಮಾಡುತ್ತಿದ್ದ ಮೇಧಾವಿಗಳು. ಲಕ್ಷಾಂತರ ಜನರನ್ನು ಆಳುತ್ತಿದ್ದ ನಿರಂಕುಶ ಚಕ್ರವರ್ತಿಗಿಂತ ಹೆಚ್ಚು ಕೆಲಸವುಳ್ಳವರನ್ನು ನಾವು ಕಲ್ಪಿಸಿಕೊಳ್ಳುವುದು ಬಹಳ ಕಷ್ಟ. ಆದರೂ ಇಂತಹ ರಾಜರುಗಳಲ್ಲಿ ಕೆಲವರು ಬಹಳ ಗಹನ ತತ್ತ್ವಜ್ಞಾನಿಗಳಾಗಿದ್ದರು.

ಈ ವೇದಾಂತ ಅನುಷ್ಠಾನ ಯೋಗ್ಯವಾಗಿತ್ತೆಂಬುದನ್ನು ಎಲ್ಲವೂ ತೋರು

ವುವು. ಕ್ರಮೇಣ ನಾವು ಭಗವದ್ಗೀತೆಯ ಕಾಲಕ್ಕೆ ಬಂದರೇ ಬಹುಶಃ ಹಲವರು ಇದನ್ನು ಓದಿರಬಹುದು. ಇದು ವೇದಾಂತ ತತ್ತ್ವಶಾಸ್ತ್ರದ ಮೇಲೆ ಬರೆದ ಅತ್ಯುತ್ತಮ ಭಾಷ್ಯ– ಇನ್ನೊಂದು ವಿಚಿತ್ರವೇನೆಂದರೆ, ಈ ದೃಶ್ಯಕ್ಕೆ ಹಿನ್ನೆಲೆ ರಣ ರಂಗ. ಅಲ್ಲಿಯೇ ಶ್ರೀ ಕೃಷ್ಣನು ಅರ್ಜುನನಿಗೆ ತನ್ನ ತತ್ತ್ವವನ್ನು ಹೇಳುವುದು. ಅಲ್ಲಿ ಪ್ರತಿಯೊಂದು ಪುಟದಲ್ಲಿಯೂ ಕಂಗೊಳಿಸುವ ಸಿದ್ಧಾಂತವೆ ಕರ್ಮದಲ್ಲಿ ನಿರತನಾಗಿರುವುದು. ಆದರೆ ಇವುಗಳ ಅಂತರಾಳದಲ್ಲಿ ಅನಂತ ಶಾಂತಿ ಇದೆ. ಇದೇ ಕರ್ಮರಹಸ್ಯ. ಇದನ್ನು ಹೊಂದುವುದೇ ವೇದಾಂತದ ಗುರಿ. ನಾವು ಸೋಮಾರಿತನವೆನ್ನುವ ಅಕರ್ಮವೇ ನಿಜವಾಗಿಯೂ ಎಂದಿಗೂ ಗುರಿಯಾಗ ಲಾರದು. ಇಂತಹ ಕರ್ಮವೇ ಆದರ್ಶವಾಗಿದ್ದ ಪಕ್ಷದಲ್ಲಿ ನಮ್ಮ ಸುತ್ತಲಿರುವ ಗೋಡೆಗಳು ಬಹಳ ಮೇಧಾವಿಗಳಾಗಬೇಕಾಗಿತ್ತು; ಏಕೆಂದರೆ ಅವು ಕರ್ಮ ಮಾಡುವುದಿಲ್ಲ. ಮಣ್ಣಿನ ಮುದ್ದೆ ಮರದ ತುಂಡು ಇವು ಪ್ರಪಂಚದ ಪರಮ ಶ್ರೇಷ್ಠರಾದ ಋಷಿಗಳಾಗಿರಬೇಕಾಗಿತ್ತು. ಏಕೆಂದರೆ ಅವು ಸುಮ್ಮನಿರುವುವು. ಅಥವಾ ಅಕರ್ಮವೇ ಆಸಕ್ತಿಯೊಂದಿಗೆ ಬೆರೆತರೆ, ಅದೂ ಕೂಡ ಕರ್ಮವಾಗು ವುದಿಲ್ಲ. ವೇದಾಂತದ ಗುರಿಯಾದ ನಿಜವಾದ ಕರ್ಮ ಅನಂತ ಶಾಂತಿಯೊಂದಿಗೆ ಕಲೆತಿರುವುದು. ಏನಾದರೂ ಆ ಶಾಂತಿಗೆ ಭಂಗ ಬರುವುದಿಲ್ಲ. ಮನಸ್ಸಿನ ಸಮತ್ವಕ್ಕೆ ಆತಂಕವನ್ನು ತರುವುದಿಲ್ಲ. ಕೆಲಸಮಾಡುವುದಕ್ಕೆ ಅದೇ ಉತ್ತಮ ಸ್ಥಿತಿ ಎಂಬುದನ್ನು ಜೀವನದ ಅನುಭವದಿಂದ ತಿಳಿದುಕೊಂಡಿರುವೆವು.

ಕೆಲಸಮಾಡುವುದಕ್ಕೆ ಸಾಧಾರಣವಾಗಿ ನಮಗೆ ಆಸೆ ಇಲ್ಲದೇ ಇದ್ದರೆ, ಹೇಗೆ ಕೆಲಸಮಾಡಲು ಸಾಧ್ಯವೆಂದು ಹಲವು ಬಾರಿ ನನ್ನನ್ನು ಕೇಳಿರುವರು. ಕೆಲವು ವರುಷಗಳ ಹಿಂದೆ ನಾನೂ ಕೂಡ ಹಾಗೆ ಆಲೋಚಿಸಿದ್ದೆ. ಆದರೆ ನನಗೆ ವಯಸ್ಸಾದಂತೆಲ್ಲ, ಹೆಚ್ಚು ಅನುಭವಗಳನ್ನು ಪಡೆದಂತೆಲ್ಲ ಅದು ನಿಜವಲ್ಲವೆಂದು ತೋರುತ್ತದೆ. ಆಸಕ್ತಿ ಕಡಿಮೆಯಾದಷ್ಟು ಉತ್ತಮವಾಗಿ ಕೆಲಸಮಾಡುವೆವು. ಶಾಂತವಾಗಿದ್ದಷ್ಟೂ ನಮಗೆ ಉತ್ತಮ. ನಾವು ಮಾಡುವ ಕೆಲಸವೂ ಹೆಚ್ಚಾಗುವುದು. ನಮ್ಮ ಭಾವನೆಯ ಉದ್ವೇಶವನ್ನು ಯಾವ ತಡೆಯೂ ಇಲ್ಲದೆ ಹರಿಯಲು ಬಿಟ್ಟರೆ ಇದರಿಂದಎಷ್ಟೋ ಶಕ್ತಿವ್ಯಯವಾಗುವುದು. ನಮ್ಮ ನರಗಳು ಬಲಹೀನವಾಗುವುವು, ಮನಸ್ಸಿಗೆ ಅಶಾಂತಿ ತರುವುವು. ಅತಿ ಅಲ್ಪಕಾರ್ಯವನ್ನು ಮಾತ್ರ ಸಾಧಿಸಬಹುದು. ಯಾವ ಶಕ್ತಿ ಕಾರ್ಯರೂಪದಲ್ಲಿ ಹೊರದೋರಬೇಕಾ ಗಿತ್ತೊ ಅದು ಯಾವುದಕ್ಕೂ ಪ್ರಯೋಜನವಿಲ್ಲದ ಉದ್ವೇಗದಲ್ಲಿ ಕೊನೆಗಾಣುವುದು. ಮನಸ್ಸು ಶಾಂತವಾಗಿ ಏಕಾಗ್ರವಾದಾಗ ಮಾತ್ರ ಅದರ ಎಲ್ಲಾ ಶಕ್ತಿಯನ್ನು

ಒಳ್ಳೆಯ ಕಾರ್ಯರೂಪದಲ್ಲಿ ಉಪಯೋಗಿಸಬಹುದು. ಪ್ರಪಂಚ ಜನ್ಮವಿತ್ತ ಪ್ರಚಂಡ ಕಾರ್ಯೋನ್ಮುಖರಾದ ವ್ಯಕ್ತಿಗಳ ಜೀವನವನ್ನು ಓದಿದರೆ ಅವರು ಅಷ್ಟೇ ಅದ್ಭುತವಾದ ಶಾಂತಿ ಜೀವಿಗಳೆಂಬುದನ್ನು ನೋಡುತ್ತೇವೆ. ಯಾವುದರಿಂದಲೂ ಅವರ ಮನಸ್ಸಿನ ಸಮತ್ವಕ್ಕೆ ಭಂಗ ಬರುವಂತೆ ಇರಲಿಲ್ಲ. ಆದಕಾರಣವೆ ಯಾರು ಕೋಪತಾಳುವರೋ, ಅವರು ಎಂದಿಗೂ ಹೆಚ್ಚು ಕೆಲಸಮಾಡಲಾರರು. ಏನಾದರೂ ಯಾರು ಕೋಪಗೊಳ್ಳಲಾರರೊ ಅವರು ಎಷ್ಟೋ ಕೆಲಸಗಳನ್ನು ಸಾಧಿಸುತ್ತಾರೆ. ಯಾವ ಮನುಷ್ಯನು, ಕೋಪ ಅಸೂಯೆ ಮತ್ತು ಇನ್ನೂ ಇತರ ಯಾವುದಾದರೂ ಹೀನ ಗುಣಕ್ಕೆ ಬೀಳುತ್ತಾನೆಯೋ, ಅವನು ಕೆಲಸ ಮಾಡಲಾರ. ತನ್ನ ಮನಸ್ಸು ಚದರಿ ಹೋಗುವುದೇ ಹೊರತು ಕಾರ್ಯತಃ ಏನೂ ಮಾಡಲಾರ. ಯಾರು ಶಾಂತರೋ ಕ್ಷಮಾಜೀವಿಗಳೋ, ಎಲ್ಲರನ್ನೂ ಒಂದೇ ದೃಷ್ಟಿಯಿಂದ ನೋಡುವರೋ, ಸಮತ್ವ ಬುದ್ಧಿಯುಳ್ಳವರೋ, ಅವರೇ ಹೆಚ್ಚು ಪಾಲು ಕೆಲಸವನ್ನು ಮಾಡುವರು.

ವೇದಾಂತ ನಮಗೆ ಆದರ್ಶವನ್ನು ಬೋಧಿಸುತ್ತದೆ. ನಮಗೆ ಗೊತ್ತಿರುವಂತೆಯೇ, ಯಾವಾಗಲೂ ಆದರ್ಶ ಇಂದಿನ ನಿಜಸ್ಥಿತಿಗಿಂತ ಅಂದರೆ ಇಂದು ಯಾವುದು ಅನುಷ್ಠಾನದಲ್ಲಿ ಇದೆಯೋ, ಅದಕ್ಕಿಂತ ಮೇಲಿರುವುದು. ಮಾನವನಲ್ಲಿ ಎರಡು ಸ್ವಭಾವಗಳಿವೆ. ಒಂದು ಆದರ್ಶವನ್ನು ನಮ್ಮ ಇಂದಿನ ಜೀವನದೊಂದಿಗೆ ರಾಜಿಮಾಡಿಕೊಳ್ಳುವುದು, ಮತ್ತೊಂದು, ನಮ್ಮ ಇಂದಿನ ಜೀವನವನ್ನು ಆದರ್ಶದ ಮೇಲಿನ ಮಟ್ಟಕ್ಕೆ ತರುವುದು. ಇದನ್ನು ತಿಳಿದುಕೊಳ್ಳುವುದು ಬಹಳ ಮುಖ್ಯ. ಏಕೆಂದರೆ, ಮೊದಲನೆ ಸ್ವಭಾವವೇ ನಮ್ಮ ಜೀವನವನ್ನು ಮೋಹ ಪಾಶಕ್ಕೆ ಕೆಡುಹುವುದು. ನನಗೆ ಯಾವುದೋ ಒಂದು ವಿಧದ ಕೆಲಸ ಮಾಡುವುದಕ್ಕೆ ಬರುತ್ತದೆ ಎಂದು ಆಲೋಚಿಸುವೆನು. ಆ ಕೆಲಸದಲ್ಲಿ ಬಹುಶಃ ಮುಕ್ಕಾಲು ಪಾಲು ಕೆಟ್ಟದ್ದು ; ಬಹುಶಃ ಆ ಕೆಲಸಕ್ಕೆ, ಕೋಪ, ಆಸೆ, ಸ್ವಾರ್ಥತೆ, ಇವೇ ಉತ್ತೇಜನಕಾರಿ. ಈಗ, ನನಗೆ ಯಾವುದಾದರೂ ಒಂದು ಆದರ್ಶವನ್ನು ಬೋಧಿಸುವುದಕ್ಕೆ ಯಾರಾದರು ಬಂದು, ಮೊದಲು ಸ್ವಾರ್ಥತೆಯನ್ನು ತೊರೆಯಬೇಕೆಂದು ಬೋಧಿಸಿದರೆ, ಅದು ಅನುಷ್ಠಾನಕ್ಕೆ ತರಲು ಸಾಧ್ಯವಿಲ್ಲವೆಂದು ನಾನು ಯೋಚಿಸುತ್ತೇನೆ. ಆದರೆ ನನ್ನ ಸ್ವಾರ್ಥತೆಯೊಂದಿಗೆ ರಾಜಿಮಾಡಿಕೊಳ್ಳುವಂತಹ ಆದರ್ಶವನ್ನು ಯಾರಾದರೂ ತಂದರೆ ನನಗೆ ತುಂಬಾ ಸಂತೋಷ. ಅದನ್ನು ಸ್ವೀಕರಿಸಲು ಆನಂದದಿಂದ ಕುಣಿದಾಡುವೆನು. ಅದೇ ನನಗೆ ಬೇಕಾದ ಆದರ್ಶ. ಸಂಪ್ರದಾಯ (orthodox) ವೆನ್ನುವುದಕ್ಕೆ ಹೇಗೆ ಅನೇಕ ಅರ್ಥ

ಗಳನ್ನು ಬರುವಂತೆ ಮಾಡಿದೆಯೋ, ಹಾಗೆಯೇ ಅನುಷ್ಠಾನವೆಂಬ ಪದವೂ ಕೂಡ. "ನನ್ನ ಸಂಪ್ರದಾಯ ಸತ್ಯ ಸಂಪ್ರದಾಯ" "ನಿನ್ನ ಸಂಪ್ರದಾಯ ದುಸ್ಸಂಪ್ರದಾಯ". ಇದರಂತೆಯೇ ಅನುಷ್ಠಾನವೆಂಬ ಪದವೂ ಕೂಡ. ನನಗೆ ಯಾವುದು ಅನುಷ್ಠಾನಕ್ಕೆ ಯೋಗ್ಯವೆಂದು ತೋರುತ್ತದೆಯೋ, ಅದೊಂದೆ ಪ್ರಪಂಚದಲ್ಲಿ ಅನುಷ್ಠಾನಕ್ಕೆ ಯೋಗ್ಯ. ನಾನೊಬ್ಬ ವ್ಯಾಪಾರಸ್ಥನಾದರೆ, ಪ್ರಪಂಚದಲ್ಲಿ ವ್ಯಾಪಾರವೊಂದೆ ಅನುಷ್ಠಾನ ಯೋಗ್ಯವೆಂದು ತಿಳಿಯುತ್ತೇನೆ. ನಾನು ಒಬ್ಬ ಕಳ್ಳನಾಗಿದ್ದರೆ, ಕಳ್ಳತನ ಮಾಡುವುದೊಂದೆ ಪ್ರಪಂಚದಲ್ಲಿ ಉತ್ತಮವಾದ ವ್ಯವಹಾರವೆಂದೂ, ಉಳಿದವರು ವ್ಯವಹಾರ ಚತುರರಲ್ಲವೆಂದೂ, ನಾನು ತಿಳಿಯುತ್ತೇನೆ. ನೋಡಿದಿರಾ! ಈ ಅನುಷ್ಠಾನವೆಂಬ ಪದವನ್ನು! ನಾವುಗಳು ಯಾವುದನ್ನು ಮಾಡಬಲ್ಲೆವೋ, ಯಾವ ಕೆಲಸದ ಮೇಲೆ ನಮಗೆ ಪ್ರೀತಿಯೋ, ಅದಕ್ಕೆ ಉಪಯೋಗಿಸುವುದನ್ನು! ಆದಕಾರಣ ವೇದಾಂತ ಎಷ್ಟು ಅನುಷ್ಠಾನ ಸಾಧ್ಯವಾದರೂ, ಅದು ಆದರ್ಶದ ದೃಷ್ಟಿಯಿಂದ ಎಂಬುದನ್ನು ತಿಳಿದುಕೊಳ್ಳಬೇಕೆಂದು ನಿಮಗೆ ಹೇಳುತ್ತೇನೆ. ಎಷ್ಟು ಮೇಲಿದ್ದರೂ, ವೇದಾಂತ ಒಂದು ಅಸಾಧ್ಯವಾದ ಆದರ್ಶವನ್ನು ಬೋಧಿಸುವುದಿಲ್ಲ. ಅದು ಆದರ್ಶಕ್ಕೆ ಯೋಗ್ಯವಾದಷ್ಟು ಮೇಲಿರುವುದು. ಒಂದು ಮಾತಿನಲ್ಲಿ ಹೇಳಬೇಕಾದರೇ ಈ ಆದರ್ಶವೇ ನೀನು ಪವಿತ್ರನೆಂಬುದು. "ತತ್ವಮಸಿ" ಇದೇ ವೇದಾಂತದ ಸಾರ. ಇದೇ ಅನೇಕ ಶಾಕೋಪಶಾಖೆಗಳನ್ನು ಮಾಡಿದ ಮೇಲೆ, ಬುದ್ಧಿಯ ಗರಡಿಯ ಮನೆಯಲ್ಲಿ ಪಳಗಿದ ಮೇಲೆ, ಮಾನವನ ಆತ್ಮನೇ ಶುದ್ಧವೆಂದೂ, ಸರ್ವಜ್ಞವೆಂದೂ ನಿಮಗೆ ಗೊತ್ತಾಗುವುದು. ಆತ್ಮನ ವಿಚಾರದಲ್ಲಿ ಜನನ ಮರಣ ಮುಂತಾದ ಮೂಢ ನಂಬಿಕೆಗಳನ್ನು ನಾವು ಉಪಯೋಗಿಸಿದರೆ ಅವುಗಳೆಲ್ಲ ಕಾಲ್ಪನಿಕ ಮತ್ತು ನಿಷ್ಪ್ರಯೋಜನ. ಆತ್ಮನು ಎಂದೂ ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ನಾವು ಇನ್ನೇನು ಸಾಯುವುದರಲ್ಲಿರುವೆವು, ಸಾಯುವುದಕ್ಕು ಅಂಜುವೆವು, ಎಂಬ ಭಾವನೆಗಳೆಲ್ಲ ಮೂಢ ನಂಬಿಕೆಗಳು. ಇವುಗಳನ್ನು ಮಾಡಬಲ್ಲೆವು, ಅಥವಾ ಮಾಡಲಾರೆವು ಎಂಬ ಭಾವನೆಗಳೆಲ್ಲ ಕೆಲಸಕ್ಕೆ ಬಾರದವು. ನಾವು ಯಾವುದನ್ನು ಬೇಕಾದರೂ ಮಾಡಬಲ್ಲೆವು. ಮೊದಲು ನಿಮ್ಮಲ್ಲಿ ಶ್ರದ್ಧೆಯನ್ನು ಇಡಿ ಎಂದು ವೇದಾಂತ ಬೋಧಿಸುವುದು. ಪ್ರಪಂಚದ ಕೆಲವು ಧರ್ಮಗಳು, ಯಾರಿಗೆ ತಮಗಿಂತ ಬೇರೆಯಾದ ದೇವರಲ್ಲಿ ನಂಬಿಕೆ ಇಲ್ಲವೋ ಅವರನ್ನು ನಾಸ್ತಿಕರೆಂದು ಕರೆಯುವಂತೆ, ವೇದಾಂತ, ಯಾರಿಗೆ ಆತ್ಮಶ್ರದ್ಧೆ ಇಲ್ಲವೋ ಅವರನ್ನು ನಾಸ್ತಿಕರೆಂದು ಸಾರುತ್ತದೆ. ಅನೇಕರಿಗೆ ಇದು ನಿಸ್ಸಂದೇಹವಾಗಿಯೂ ಬಹಳ ಕಷ್ಟದ ಆದರ್ಶ. ನಮ್ಮಲ್ಲಿ

ಅನೇಕರು, ಈ ಆದರ್ಶವನ್ನು ಎಂದಿಗೂ ಸಾಧಿಸಲಾರೆವು ಎಂದು ತಿಳಿಯುವ್ವ
ಆದರೆ ಪ್ರತಿಯೊಬ್ಬರೂ ಇದನ್ನು ಸಾಧಿಸುವುದಕ್ಕೆ ಸಾಧ್ಯವೆಂಬುದಾ
ವೇದಾಂತ ಸಾರುವುದು. ಗಂಡಸಾಗಲೀ, ಹೆಂಗಸಾಗಲೀ, ಮಕ್ಕಳಾಗಲಿ
ಜಾತಿಭೇದವಾಗಲೀ ಅಥವಾ ಲಿಂಗಭೇದವಾಗಲೀ ಯಾವುದೂ, ಈ ಆದರ್ಶ
ಸಾಕ್ಷಾತ್ಕಾರಕ್ಕೆ ಅಡಚಣೆ ತರಲಾರವು. ಏಕೆಂದರೆ ಇದನ್ನು ಆಗಲೇ ಸಾಧಿ
ಆಗಿದೆ. ಈ ಆದರ್ಶ ಆಗಲೇ ಅಲ್ಲಿ ಇದೆ ಎಂಬುದನ್ನು ವೇದಾಂತ ತೋರುತ್ತ

ವಿಶ್ವಶಕ್ತಿ ಎಲ್ಲ ಆಗಲೇ ನಮ್ಮಲ್ಲಿರುವುದು. ನಮ್ಮ ಕಣ್ಣುಗಳನ್ನು ಕೈ
ಳಿಂದ ಮುಚ್ಚಿಕೊಂಡು ಕತ್ತಲೆ ಎಂದು ಅಳುವವರು ನಾವು. ನಮ್ಮ ಸುತ್ತಲ
ಯಾವ ಕತ್ತಲೆಯೂ ಇಲ್ಲವೆಂಬುದನ್ನು ತಿಳಿಯಿರಿ. ಕೈಗಳನ್ನು ತೆಗೆಯಿ
ಮೊದಲಿನಿಂದಲೇ ಇದ್ದ ಬೆಳಕು ಅಲ್ಲೇ ಇರುವುದು. ಕತ್ತಲೆ ಎಂದಿಗೂ ಇ
ಲ್ಲಿಲ್ಲ. ನಿಶ್ಶಕ್ತಿ ಎಂದಿಗೂ ಇರಲಿಲ್ಲ. ಮೂಢರಾದ ನಾವು ಬಲಹೀನರೆಂ
ಅಳುವೆವು. ಮೂಢರಾದ ನಾವು ಪಾಪಿಗಳೆಂದು ಅಳುವೆವು. ಆದಕಾರಣ
ವೇದಾಂತ ಈ ಆದರ್ಶ ಅನುಷ್ಠಾನ ಸಾಧ್ಯವೆಂದು ಮಾತ್ರ ಹೇಳುವುದಿಲ್ಲ
ಇದು ಯಾವಾಗಲೂ ಇದ್ದುದೇ ಹೀಗೆ. ಈ ಸತ್ಯವೇ, ಈ ಆದರ್ಶವೇ, ನಮ್ಮ
ನಿಜವಾದ ಸ್ವಭಾವ. ನೀವು ನೋಡುವ ಉಳಿದವುಗಳೆಲ್ಲವೂ ಅಸತ್ಯ, ಕಪಟ
ಎಂದು ನೀವು, "ನಾನೊಬ್ಬ ಹುಲುಮನುಜ" ಎಂದು ಹೇಳುತ್ತೀರೋ, ಆ
ನೀವು ಹೇಳುತ್ತಿರುವುದು ಸತ್ಯವಲ್ಲ. ನಿಮಗೆ ನೀವೇ ಸುಳ್ಳನ್ನು ಹೇಳಿಕೊಳ್ಳು
ತ್ತೀರಿ. ನಿಮಗೆ ನೀವೆ ಕೆಲಸಕ್ಕೆ ಬಾರದ ದುರ್ಬಲನನ್ನಾಗಿ ಮಾಡಿಕೊಳ್ಳುತ್ತೀರಿ
ನೀಚನನ್ನಾಗಿ ಮಾಡಿಕೊಳ್ಳುತ್ತೀರಿ.

ವೇದಾಂತ ಯಾವ ಪಾಪವನ್ನೂ ಒಪ್ಪಿಕೊಳ್ಳುವುದಿಲ್ಲ. ತಪ್ಪನ್ನು ಮಾತ್ರ
ಒಪ್ಪಿಕೊಳ್ಳುವುದು. ನಾನು ನಿರ್ಬಲನೆಂದೂ, ಪಾಪಿಯೆಂದೂ, ಕೆಲಸಕ್ಕೆ
ಬಾರದವಸ್ತುವೆಂದೂ, ತನಗೆ ಯಾವ ಶಕ್ತಿಯು ಇಲ್ಲವೆಂದೂ, ಅದನ್ನು ಮತ್ತು
ಇದನ್ನು ಮಾಡುವುದಕ್ಕೆ ಆಗುವುದಿಲ್ಲವೆಂದೂ, ತಿಳಿದುಕೊಳ್ಳುವುದು ಅತ್ಯಂತ
ಘೋರತಮವಾದ ತಪ್ಪೆಂದು ವೇದಾಂತ ಸಾರುವುದು. ಈ ರೀತಿಯಲ್ಲಿ ನೀನು
ಆಲೋಚನೆ ಮಾಡಿದಾಗಲೆಲ್ಲ, ನಿನ್ನನ್ನು ಆಗಲೇ ಬಂಧಿಸಿದ ಕಟ್ಟಿಗೆ ಮತ್ತೊಂದು
ಕಟ್ಟನ್ನು ಬಿಗಿದಂತೆ ಆಗುವುದು. ಆವರಿಸಿಕೊಂಡಿರುವ ಮೋಹದ ತೆರೆಗೆ
ಮತ್ತೊಂದನ್ನು ಸೇರಿಸಿದಂತೆ ಆಗುವುದು. ಆದಕಾರಣ ಯಾರು ತಾನು
ನಿರ್ಬಲನೆಂದು ಆಲೋಚಿಸುತ್ತಾನೋ, ಅವನದು ತಪ್ಪು. ಯಾರು ತಾನು
ಪಾಪಿ ಎಂದು ತಿಳಿದುಕೊಳ್ಳುತ್ತಾನೆಯೋ, ಅವನದು ತಪ್ಪು. ಅವನು ಒಂದು

ಹೀನ ಆಲೋಚನೆಯನ್ನು ಜಗತ್ತಿಗೆ ಎಸೆಯುತ್ತಿರುವನು. ಇಂದಿನ ಜೀವನ ದೊಂದಿಗೆ, ಮೋಹಕ್ಕೆ ಒಳಗಾದ ಬಾಳಿನೊಂದಿಗೆ, ನಾವು ವಹಿಸಿಕೊಂಡಿರುವ ಈ ಕಪಟ ಜೀವನದೊಂದಿಗೆ, ರಾಜಿ ಮಾಡಿಕೊಳ್ಳುವ ಪ್ರಯತ್ನ ವೇದಾಂತದಲ್ಲಿ ಇಲ್ಲವೆನ್ನುವುದನ್ನು ನಾವು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಕಪಟ ಜೀವನ ಮಾಯವಾಗಬೇಕು. ಅನಾದಿಯಿಂದಲೂ ಇರುವ ನಿತ್ಯಜೀವನ ಹೊರಗೆ ಬರ ಬೇಕು, ಕಂಗೊಳಿಸಬೇಕು. ಯಾವ ಮನುಷ್ಯನೂ ಪವಿತ್ರವಾಗುವುದಿಲ್ಲ. ಹೆಚ್ಚು ಹೆಚ್ಚು ಪವಿತ್ರತೆಯನ್ನು ವ್ಯಕ್ತಗೊಳಿಸುವನು. ಮೋಹದ ತೆರೆ ಜಾರು ವುದು. ಆತ್ಮದ ಆಜನ್ಮ ಪವಿತ್ರತೆ ಪ್ರಕಾಶಕ್ಕೆ ಬರುವುದು. ಅನಂತ ಪವಿತ್ರತೆ ಆತ್ಮಸಾಯುಜ್ಯ, ಪ್ರೇಮ ಮತ್ತು ಶಕ್ತಿಯೆಲ್ಲ ಆಗಲೇ ನಮ್ಮದಾಗಿರುವುದು.

ಕಾನನಾಂತರಗಳಲ್ಲಿ ಗಿರಿಗುಹೆಗಳಲ್ಲಿ ಇದನ್ನು ಸಾಕ್ಷಾತ್ಕಾರ ಮಾಡಿ ಕೊಳ್ಳುವುದು ಮಾತ್ರವಲ್ಲ; ಜೀವನದಲ್ಲಿ ಎಲ್ಲಾ ಕಾರ್ಯಕ್ಷೇತ್ರಗಳಲ್ಲಿರುವ ಮನುಷ್ಯರಿಂದಲೂ ಇದು ಸಾಧ್ಯವೆಂದು ವೇದಾಂತ ಬೋಧಿಸುವುದು. ಈ ತತ್ತ್ವ ಗಳನ್ನು ಕಂಡು ಹಿಡಿದವರು ಗುಹೆ ಕಾನನಗಳ ವಾಸಿಗಳೂ ಅಲ್ಲ; ಅಥವಾ ಸಾಧಾರಣ ಜೀವಿಗಳಂತೆ ಜೀವನ ನಡೆಸುತ್ತಿದ್ದವರು ಅಲ್ಲವೆಂಬುದನ್ನು ನಾವು ನೋಡಿರುವೆವು. ಅವರು ಅತ್ಯುತ್ತಮವಾದ ಕರ್ಮಜೀವನವನ್ನು ನಡೆಸಿದವರೆಂದು ನಾವು ಪ್ರಮಾಣಸಹಿತ ಒಪ್ಪಲೇಬೇಕಾಗುತ್ತದೆ. ಸೇವೆಗೆ ಆಜ್ಞೆ ಮಾಡಬೇಕಾ ಗಿತ್ತು; ಸಿಂಹಾಸನದಮೇಲೆ ಕುಳಿತು ರಾಜ್ಯಭಾರ ಮಾಡಬೇಕಾಗಿತ್ತು; ಲಕ್ಷಾಂತರ ಜನರ ಹಿತ ರಕ್ಷಣೆಯನ್ನು ನೋಡಿಕೊಳ್ಳಬೇಕಾಗಿತ್ತು. ಇದೆಲ್ಲ ನಿರಂಕುಶ ಪ್ರಭುತ್ವದ ಕಾಲದಲ್ಲಿ. ರಾಜನು ಬಹುಪಾಲು ಕೇವಲ ಅಲಂಕಾರಪ್ರಾಯ ವಾಗಿರುವ ಇಂದಿನಂತಹಕಾಲದಲ್ಲಿ ಅಲ್ಲ. ಆದರೂ ಈ ಮಹದಾಲೋಚನೆ ಗಳನ್ನು ಮಾಡುವುದಕ್ಕೆ, ಅದನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದಕ್ಕೆ ಮತ್ತು ಉಪದೇಶ ಮಾಡುವುದಕ್ಕೆ ಅವರಿಗೆ ಸಮಯ ಸಿಕ್ಕುತ್ತಿತ್ತು. ನಮ್ಮ ಜೀವನ ಅವರ ಜೀವನದೊಂದಿಗೆ ಹೋಲಿಸಿ ನೋಡಿದರೆ ವಿರಾಮದಂತಿದೆ. ಹೀಗಿರುವಾಗ ನಮಗೆ ಅವರಿಗಿಂತ ಎಷ್ಟು ಹೆಚ್ಚು ಅಭ್ಯಾಸಕ್ಕೆ ಕಾಲವಿದೆ. ಅವರೊಂದಿಗೆ ಹೋಲಿಸಿ ನೋಡಿದರೆ ಸದಾ ಕಾಲವೂ ವಿರಾಮದಂತಿದೆ. ಮಾಡುವುದಕ್ಕೆ ಇರು ವುದು ಬಹಳ ಸ್ವಲ್ಪ ಕೆಲಸ. ಅಂತಹ ಆದರ್ಶಗಳನ್ನು ಅಭ್ಯಾಸಮಾಡುವುದಕ್ಕೆ ಆಗುವುದಿಲ್ಲವೆಂದರೆ ನಮಗೆ ನಾಚಿಕೆಕೇಡು. ಪೂರ್ವಕಾಲದ ನಿರಂಕುಶ ಸಾರ ಭೌಮರೊಂದಿಗೆ ಹೋಲಿಸಿ ನೋಡಿದರೆ ನಮಗೆ ಇರುವ ಆವಶ್ಯಕತೆಗಳು ಬಹಳ ಸ್ವಲ್ಪ. ಕುರುಕ್ಷೇತ್ರದ ಸಮರಾಂಗಣದಲ್ಲಿ ಮಹಾ ಸೈನ್ಯದ ಮೇಲ್ವಿಚಾರಣೆ

ನೋಡಿಕೊಳ್ಳುತ್ತಿದ್ದ ಅರ್ಜುನನೊಂದಿಗೆ ಹೋಲಿಸಿ ನೋಡಿದರೆ ಸನ್ನ ಬಯಕೆಗಳ ಅತಿ ಅಲ್ಪ. ಆದರೂ ಆ ಸಮರದ ಗಡಿಬಿಡಿಯ ಮಧ್ಯದಲ್ಲಿ ಅತಿಗಹನ ತತ್ತ್ವವನ್ನು ವ್ಯಕ್ತಪಡಿಸುವುದಕ್ಕೆ ಮತ್ತು ಅದನ್ನು ಅನುಷ್ಠಾನಕ್ಕೆ ತರುವುದಕ್ಕೆ ಕಾ ಸಿಕ್ಕಿತು. ಅವರಿಗಿಂತ ಸ್ವತಂತ್ರರಾಗಿ, ಸುಲಭವಾಗಿ, ಸೌಖ್ಯದಲ್ಲಿರುವ ನಮ ಅವರು ಮಾಡಿದಷ್ಟನ್ನಾದರೂ ಮಾಡುವುದಕ್ಕೆ ಈ ಜೀವನದಲ್ಲಿ ಸಾಧ್ಯವಾ ಬೇಕು. ನಮಗೆ ನಿಜವಾಗಿಯೂ ಒಳ್ಳೆಯದಕ್ಕೆ ಉಪಯೋಗಿಸಬೇಕೆಂಬ ಆ ಇದ್ದರೆ, ನಮ್ಮಲ್ಲಿರುವ ಅನೇಕರಿಗೆ ನಮಗೆ ತಿಳಿದಿರುವುದಕ್ಕಿಂತ ಹೆಚ್ಚು ವಿರಾಮ ಇದೆ. ನಾವು ಪ್ರಯತ್ನಪಟ್ಟರೆ ನಮಗೆ ಇರುವ ಸ್ವಾತಂತ್ರ್ಯದಿಂದ ಇನ್ನೂರ ಆದರ್ಶಗಳ ಸಿದ್ಧಿಯನ್ನು ಪಡೆಯಬಹುದು. ಆದರೆ ನಾವು ಆದರ್ಶವನ್ನು ಈಗ ನಾವಿರುವ ಹೀನಸ್ಥಿತಿಗೆ ಇಳಿಸಕೂಡದು. ನಮ್ಮ ತಪ್ಪಿಗೆ ಕ್ಷಮಾಪ ಬೇಡುವ ರೀತಿಯಲ್ಲಿ ಕೆಲವರು ನಮಗೆ ಚಿತಾವಣೆಮಾಡಿ, ತಮ್ಮಲ್ಲಿರುವ ಕೆ ಸಕ್ಕೆ ಬಾರದ ಆಸೆ ಆಕಾಂಕ್ಷೆಗಳಲ್ಲಿ ಹೇಗೆ ಕ್ಷಮಾಪಣೆಯನ್ನು ಬೇಡಬೇಕೆಂಬ ದನ್ನು ಕಲಿಸುವರು. ಅವರ ಆದರ್ಶವೇ ನಮಗೆ ಬೇಕಾಗಿರುವುದೆಂದು ನಾವ ತಿಳಿಯುವೆವು. ಆದರೆ ಅದು ಹೀಗಲ್ಲ. ವೇದಾಂತ ಇಂತಹದಾವುದನ್ನು ಬೇಡುವುದಿಲ್ಲ. ಇಂದು ನಾವಿರುವ ಸ್ಥಿತಿ ಆದರ್ಶದ ಸ್ಥಿತಿಗೇರಬೇಕು ಇಂದಿನ ನಮ್ಮ ಜೀವನವನ್ನು ಅನಂತ ಬಾಳುವೆಯಲ್ಲಿ ಬೆರೆಯುವಂ ಮಾಡಬೇಕು.

ವೇದಾಂತದ ಏಕಮಾತ್ರ ಮುಖ್ಯ ಆದರ್ಶವೇ ಈ ಏಕತ್ವವೆಂಬುದನ್ನು ಯಾವಾಗಲೂ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಯಾವುದರಲ್ಲಿಯೂ ಎರಡಿಲ್ಲ ಎರಡು ಜೀವನವಿಲ್ಲ ಅಥವಾ ಎರಡು ಬೇರೆ ಪ್ರಪಂಚಕ್ಕೆ ಭಿನ್ನ ಜೀವನವೂ ಇಲ್ಲ. ಮೊದಲು ವೇದ ಸ್ವರ್ಗ ಮುಂತಾದುವುಗಳನ್ನು ಹೇಳುವುದನ್ನು ನೀವು ನೋಡುತ್ತೀರಿ. ಆದರೆ ಅವರು ನಂತರ ತಮ್ಮ ತತ್ತ್ವದ ಪರಮ ಆದರ್ಶಕ್ಕೆ ಬಂದಾಗ, ಅವುಗಳೆಲ್ಲವನ್ನು ಆಚೆಗೆಸೆಯುವರು. ಇರುವುದು ಒಂದೇ ಜೀವನ ಒಂದೇ ಪ್ರಪಂಚ, ಒಂದೇ ಸತ್ಯ. ಎಲ್ಲವೂ ಅದೊಂದೆ. ವ್ಯತ್ಯಾಸವಿರುವುದು ಏಕಮಾತ್ರ ಆದರ್ಶದ ಹೆಚ್ಚು ಕಡಿಮೆ ಆವಿರ್ಭಾವನೆಯಲ್ಲಿ ಅಲ್ಲದೆ ಆದರ್ಶದ ಭಿನ್ನತೆಯಲ್ಲಿ ಅಲ್ಲ. ನಮ್ಮ ಜೀವನದ ವ್ಯತ್ಯಾಸದ ಜಾತಿ ಭೇದದಲ್ಲಿ ಇಲ್ಲ. ಪ್ರಾಣಿಗಳು ಮಾನವನಿಂದ ಪ್ರತ್ಯೇಕವಾದುವೆಂದೂ, ನಮ್ಮ ಆಹಾರಕ್ಕೋಸುಗವಾಗಿಯೇ ದೇವರು ಅವನ್ನು ಸೃಷ್ಟಿಸಿರುವನು ಎಂಬ ಅಭಿಪ್ರಾಯಗಳನ್ನು ವೇದಾಂತ ಸಂಪೂರ್ಣ ವಿರೋಧಿಸುವುದು.

ಉದಾಹರಣೆಗಾಗಿ, ಪ್ರಾಣಿಗಳನ್ನು ಪರೀಕ್ಷಾರ್ಥವಾಗಿ ಕೊಲ್ಲುವುದನ್ನು ವಿರೋಧಿಸುವ ಒಂದು ಸಂಘವನ್ನು ಕೆಲವರು ದಯೆಯಿಂದ ಸ್ಥಾಪಿಸಿರುವರು. ಅವರ ಒಬ್ಬ ಸಧಸ್ಯನನ್ನು ನಾನು ಕೇಳಿದೆ; "ಸಹೋದರನೆ, ಪ್ರಾಣಿಗಳನ್ನು ಆಹಾರಕ್ಕಾಗಿ ಕೊಲ್ಲುವುದು ನ್ಯಾಯ; ವೈಜ್ಞಾನಿಕ ಪರೀಕ್ಷಾರ್ತವಾಗಿ ಒಂದೆರಡು ಪ್ರಾಣಿಗಳನ್ನು ಕೊಲ್ಲುವುದು ಅನ್ಯಾಯ ಎಂದು ಏತಕ್ಕೆ ತಿಳಿಯುತ್ತಿ?" ಅದಕ್ಕೆ ಆತನು, "ಪರೀಕ್ಷಾರ್ತವಾಗಿ ಕೊಲ್ಲುವುದು ಮಹಾ ಪಾತಕ. ಆದರೆ ನಮ್ಮ ಆಹಾರಕ್ಕೋಸುಗವಾಗಿಯೆ ದೇವರು ಪ್ರಾಣಿಗಳನ್ನು ಕೊಟ್ಟಿರುವುದು" ಎಂದನು. ಜೀವನದ ಏಕತ್ವದಲ್ಲಿ ಪ್ರಾಣಿಗಳೂ ಕೂಡ ಸೇರಿವೆ. ವ್ಯತ್ಯಾಸವಿರುವುದು ತರತಮದಲ್ಲಿ ಅಲ್ಲದೆ ವಸ್ತು ಭೇದದಲ್ಲಿ ಅಲ್ಲ. ಜೀವಾಣು ಮತ್ತು ನಾನೂ ಒಂದೆ. ವ್ಯತ್ಯಾಸವಿರುವುದು ತರತಮದಲ್ಲಿ ಮಾತ್ರ (degree). ಅತ್ಯುನ್ನತ ಜೀವನದ ದೃಷ್ಟಿಯಿಂದ ಈ ವ್ಯತ್ಯಾಸಗಳೆಲ್ಲವೂ ಮಾಯವಾಗುವುವು. ಮನುಷ್ಯನು ಹುಲ್ಲಿಗೂ ಸಣ್ಣ ಮರಕ್ಕೂ ಬೇಕಾದಷ್ಟು ವ್ಯತ್ಯಾಸವನ್ನು ಕಾಣಬಹುದು. ಆದರೆ ಬಹಳ ಮೇಲಕ್ಕೆ ಏರಿ ಹೋದರೆ ಮರ ಮತ್ತು ಹುಲ್ಲು ಹೆಚ್ಚು ಕಡಿಮೆ ಒಂದೇ ಸಮನಾಗಿ ತೋರುವುದು. ಅದರಂತೆಯೆ ಜೀವನದ ಅತ್ಯುತ್ತಮ ಆದರ್ಶ ದೃಷ್ಟಿಯಿಂದ, ಬಹಳ ತುಚ್ಛ ಪ್ರಾಣಿಯೂ ಒಂದೆ; ಅತಿಶ್ರೇಷ್ಠ ಮಾನವನೂ ಒಂದೆ. ದೇವರಿರುವನೆಂದು ನೀವು ನಂಬಿದರೆ, ಅತಿ ಕ್ಷುದ್ರಪ್ರಾಣಿಗಳೂ ಮತ್ತು ಅತ್ಯುತ್ತಮ ಜೀವಿಯೂ ಒಂದೇ ಆಗಿರಬೇಕು. ಮನುಷ್ಯನೆಂಬ ತನ್ನ ಮಕ್ಕಳಿಗೆ ಪಕ್ಷಪಾತಿಯಾಗಿ, ಪ್ರಾಣಿಗಳೆಂಬ ತನ್ನ ಮಕ್ಕಳಿಗೆ ಕ್ರೂರನೂ ಆದರೆ ಅಂತಹ ದೇವರು ರಾಕ್ಷಸರಿಗಿಂತಲೂ ಕ್ರೂರನು. ಅಂತಹ ದೇವರನ್ನು ಪೂಜಿಸುವ ಬದಲು ನಾನು ನೂರು ಸರಿಯೂದರೂ ಪ್ರಾಣಬಿಡುವೆನು. ನನ್ನ ಇಡೀ ಜೀವನವೇ ಅಂತಹ ದೇವರೊಂದಿಗೆ ಒಂದು ಹೋರಾಟವಾಗುವುದು. ಆದರೆ ವ್ಯತ್ಯಾಸವಿಲ್ಲ. ಯಾರು ವ್ಯತ್ಯಾಸವಿದೆ ಎಂದು ಹೇಳುವರೋ, ಅವರು ಜವಾಬ್ದಾರಿಯಿಲ್ಲದ ಏನೂತಿಳಿಯದ ನಿರ್ದಯರು. ಅನುಷ್ಠಾನವೆಂಬ ಪದವನ್ನು ಅಪಾರ್ಥದಲ್ಲಿ ಉಪಯೋಗಿಸಿರುವುದಕ್ಕೆ ಇದೊಂದು ಉದಾಹರಣೆ. ನಾನೇ ಶುದ್ಧಸಸ್ಯಾಹಾರಿಯೂಗದೇ ಇರಬಹುದು, ಆದರೆ ನನಗೆ ಅದರ ಆದರ್ಶ ಗೊತ್ತಿದೆ. ನಾನು ಮಾಂಸವನ್ನು ತಿನ್ನುವಾಗ ಅದು ತಪ್ಪು ಎಂಬುದು ನನಗೆ ಗೊತ್ತಿದೆ. ಕೆಲವು ಸಮಯಗಳಲ್ಲಿ ನಾನು ಅದನ್ನು ತಿನ್ನಲೇ ಬೇಕಾಗಿ ಬಂದರೂ ಅದು ಕ್ರೂರತನವೆಂಬುದು ನನಗೆ ಗೊತ್ತಿದೆ. ಆದರ್ಶವನ್ನು ನಾವಿಂದಿರುವ ಹೀನಸ್ಥಿತಿಗೆ ಎಳೆದು ಈ ರೀತಿಯಲ್ಲಿ ನನ್ನ ನಿರ್ಬಲತೆಗೆ ಕ್ಷಮಾಪಣೆ ಬೇಡ

ಕೂಡದು. ಆದರ್ಶ ಮಾಂಸವನ್ನು ತಿನ್ನದೇ ಇರುವುದು. ಯಾವ ಪ್ರಾಣಿ ಹಿಂಸೆಯನ್ನು ಮಾಡಕೂಡದು. ಏಕೆಂದರೆ ಎಲ್ಲಾ ಪ್ರಾಣಿಗಳೂ ನಮ್ಮ ಸಹೋದರರು. ನೀವು ಅವುಗಳನ್ನು ನಿಮ್ಮ ಸಹೋದರರೆಂಬ ಭಾವದಿಂದ ನೋಡು ದಾದರೆ ಕೇವಲ ಮಾನವ ಸಹೋದರತ್ವವನ್ನು ಮಾತ್ರವಲ್ಲ, ಎಲ್ಲಾ ಜೀವಿ ಸಹೋದರತ್ವದ ಆದರ್ಶದೆಡೆಗೆ ನೀವು ಸ್ವಲ್ಪ ಮುಂದುವರಿದಿರುವಿರಿ ಎಂ ಹೇಳಲೇಬೇಕಾಗಿಲ್ಲ! ಇದು ಕೇವಲ ಮಕ್ಕಳಾಟ. ಈ ಆದರ್ಶ ಅನೇಕರಿಗೆ ಹೊಗುವುದಿಲ್ಲವೆಂದು ನಿಮಗೆ ಸಾಧಾರಣವಾಗಿ ತಿಳಿಯುತ್ತದೆ. ಏಕೆಂ ಇದು ಇಂದು ನಾವಿರುವ ಸ್ಥಿತಿಯನ್ನು ತೊರೆದು ಇನ್ನು ಮೇಲಕ್ಕೆ ಆದರ್ಶದೆ ಹೋಗಬೇಕೆಂದು ಹೇಳುತ್ತದೆ. ಅವರ ಈಗಿನ ನಡವಳಿಕೆಗೆ ಸರಿಹೋಗುವಂತ ಯಾವುದಾದರೂ ಆದರ್ಶವನ್ನು ತಂದರೆ ಅದನ್ನು ಸಂಪೂರ್ಣ ಅನುಷ್ಠಾನ ಯೋಗ್ಯವೆಂದು ತಿಳಿಯುತ್ತಾರೆ.

ಮಾನವ ಸ್ವಭಾವದಲ್ಲಿ ಬದಲಾವಣೆ ಬೇಡ ಎಂಬ ಒಂದು ಮತ ಬಹ ಬಲವಾಗಿ ಬೇರೂರಿದೆ. ಮುಂದಕ್ಕೆ ನಮಗೆ ಒಂದು ಹೆಜ್ಜೆಯನ್ನೂ ಇಡುವುದ ಇಚ್ಛೆಯಿಲ್ಲ. ನಾನು ಓದಿದ ಹಿಮದಲ್ಲಿ ಘನೀಭೂತರಾದ ಮನುಷ್ಯ ಸುದ್ದಿಯಂತೆ ಮಾನವಸ್ವಭಾವ, ಎಂದು ತಿಳಿಯುತ್ತೇನೆ. ಹಿಮದಲ್ಲಿ ಸಿಕ್ಕಿ ವವರು ತಾವು ಇನ್ನೂ ನಿದ್ದೆಮಾಡಬೇಕೆಂದು ಹೇಳುವರು. ಅವರನ್ನು ನೀ ಬಲಾತ್ಕಾರದಿಂದ ಎಳೆಯಲು ಪ್ರಯತ್ನ ಪಟ್ಟರೆ, "ನಿದ್ದೆಮಾಡೋಣ. ಹಿಮದ ಮಲಗುವುದು ಎಷ್ಟೋ ಸಂತೋಷ" ಎನ್ನುವರು. ಆ ನಿದ್ದೆಯಲ್ಲೇ ಅವ ಸಾಯುವರು. ಅದರಂತೆಯೇ ನಮ್ಮ ಸ್ವಭಾವವೂ ಕೂಡ. ಅದನ್ನು ನಮ್ಮ ಜೀವನದಲ್ಲೆಲ್ಲ ಮಾಡುತ್ತಿರುವೆವು. ಕಾಲಿನಿಂದ ಮೇಲಕ್ಕೆ ಶೀತವೇರುತ್ತ ಬರುತ್ತಿದ್ದರೂ, ನಾವು ನಿದ್ದೆ ಮಾಡಬೇಕೆಂದು ಬಯಸುವೆವು. ಆದಕಾರ ನೀವು ಆದರ್ಶದ ಸಿದ್ಧಿಗಾಗಿ ಹೋರಾಡಬೇಕು. ಯಾರಾದರೂ ಆ ಉನ್ನತಸ್ಥಿ ಯಲ್ಲಿರುವ ಆದರ್ಶವನ್ನು, ನೀವಿರುವ ಹೀನಸ್ಥಿತಿಗೆ ಎಳೆಯಲು ಯತ್ನಿಸಿದರೆ, ಉನ್ನತ ಧ್ಯೇಯವಿಲ್ಲದ ಧರ್ಮವನ್ನು ಬೋಧಿಸಿದರೆ, ಅವರ ಮಾತನ್ನು ಕೇಳಬೇ ನನ್ನ ಭಾಗಕ್ಕೆ ಅದು ಕಾರ್ಯತಃ ಸಾಧ್ಯವಾಗುವ ಧರ್ಮವಲ್ಲ. ಆದರೆ ಯಾರಾದರ ಅತ್ಯಂತ ಉತ್ತಮ ಆದರ್ಶಗಳನ್ನೊಳಗೊಂಡ ಧರ್ಮವನ್ನು ಬೋಧಿಸಿದರೆ, ನಾನ ಆದಕ್ಕೆ ಸಿದ್ಧನಾಗಿರುವೆನು. ವಿಷಯಪ್ರಲೋಭನಗಳಿಗೆ ಮತ್ತು ವಿಷಯ ದುರ್ಬಲತೆಗಳಿಗೆ ಕ್ಷಮಾಪಣೆಯನ್ನು ಯಾರಾದರೂ ಬೇಡುವಾಗ ಜೋಪಾ ವಾಗಿರಿ. ಪಾಪ! ಇಂದ್ರಿಯ ಪ್ರಲೋಭನಗಳಿಗೆ ತುತ್ತಾಧ, ವಿಚಾರ ಬುದ್ಧಿ

ಯನ್ನು ಕಳೆದುಕೊಂಡ ನಮಗೆ, ಈ ಮಾರ್ಗವನ್ನು ಯಾರಾದರೂ ಬೋಧಿಸಿದರೆ ಇದನ್ನು ಅನುಸರಿಸಿ ನಾವೆಂದಿಗೂ ಮುಂದುವರಿಯಲಾರೆವು. ನಾನು ಇಂತಹ ಸ್ಥಿತಿಗಳನ್ನು ಎಷ್ಟೋ ನೋಡಿರುವೆನು. ನನಗೆ ಪ್ರಪಂಚದ ಸ್ವಲ್ಪ ಅನುಭವ ಇದೆ. ನಾಯಿ ಬಣಬೆಗಳಂತೆ ಧರ್ಮ ಪಂಗಡಗಳು ಬೆಳೆಯುವ ದೇಶ ನಮ್ಮ ತಾಯ್ನಾಡು. ಪ್ರತಿವರುಷವೂ ಹೊಸ ಹೊಸ ಪಂಗಡಗಳು ಹುಟ್ಟುತ್ತಿರುವುವು. ಆದರೆ ನಾನು ಇದರಲ್ಲಿ ಒಂದನ್ನು ಗಮನಿಸಿರುವೆನು. ಯಾರು, ಸತ್ಯಸಾಧಕರಿಗೂ, ಇಂದ್ರಿಯ ಸುಖಾಭಿಲಾಷೆಗಳಿಗೆ ತುತ್ತಾದ ಮಾನವನಿಗೂ ರಾಜಿ ಮಾಡಿಸಲು ಒಪ್ಪುವುದಿಲ್ಲವೋ, ಅವರು ಮಾತ್ರ ಮುಂದುವರಿಯುವರು. ಎಲ್ಲಿ ಜೀವನದ ಅತ್ಯುಚ್ಚ ಧ್ಯೇಯಗಳೊಂದಿಗೆ ಇಂದ್ರಿಯಸುಖಗಳನ್ನು ಒಂದುಗೂಡಿಸುವ ತಪ್ಪು ಅಭಿಪ್ರಾಯವಿದೆಯೋ, ಎಲ್ಲಿ ದೇವನನ್ನು ಮಾನವನ ಅಧೋಗತಿಗೆ ಎಳೆಯಲು ಪ್ರಯತ್ನ ಮಾಡಿದೆಯೋ, ಅಲ್ಲೆಲ್ಲ ಕ್ಷೀಣದೆಸೆ ಪ್ರಾಪ್ತವಾಗುವುದು. ಮಾನವನನ್ನು ಇಂದ್ರಿಯಸುಖದ ಅಡಿಯಾಳನ್ನಾಗಿ ಮಾಡಕೂಡದು. ಅವನನ್ನು ದೇವತ್ವದ ಪೀಠಕ್ಕೆ ಏರಿಸಬೇಕು.

ಅದೇಕಾಲದಲ್ಲಿ ಪ್ರಶ್ನೆಯ ಇನ್ನೊಂದು ಭಾಗವಿದೆ. ಉಳಿದವರನ್ನು ನಾವು ನಿಕೃಷ್ಟ ದೃಷ್ಟಿಯಿಂದ ನೋಡಕೂಡದು. ನಾವೆಲ್ಲರೂ ಒಂದೇ ಗುರಿ ಎಡೆಗೆ ಪ್ರಯಾಣ ಮಾಡುತ್ತಿರುವೆವು. ಶಕ್ತಿಗೂ ದುರ್ಬಲತೆಗೂ ಇರುವ ಭಿನ್ನತೆ ತರತಮದಲ್ಲಿ. ಪಾಪಕ್ಕೂ ಪುಣ್ಯಕ್ಕೂ ಇರುವ ಭಿನ್ನತೆ ತರತಮದಲ್ಲಿ. ಸ್ವರ್ಗಕ್ಕೂ ನರಕಕ್ಕೂ ಇರುವ ಭಿನ್ನತೆ ತರತಮದಲ್ಲಿ. ಜೀವನಕ್ಕೂ ಮರಣಕ್ಕೂ ಇರುವ ಭಿನ್ನತೆ ತರತಮದಲ್ಲಿ. ಈ ಪ್ರಪಂಚದಲ್ಲಿರುವ ವ್ಯತ್ಯಾಸವೆಲ್ಲ ಒಂದು ವಸ್ತುವಿನ ಕೇವಲ ತರತಮದಲ್ಲಿದೆ, ವಸ್ತು ಭೇದದಲ್ಲಿಲ್ಲ; ಏಕೆಂದರೆ ಏಕತ್ವವೇ ಪ್ರಪಂಚದಲ್ಲಿರುವ ಸಕಲ ವಸ್ತುಗಳ ಗೂಢ ರಹಸ್ಯ. ಆಲೋಚನೆಯಂತೆ ಕಾಣಲೀ ಪ್ರಾಣದಂತೆ ಕಾಣಲೀ, ಆತ್ಮನಂತೆ ಕಾಣಲೀ ಅಥವಾ ದೇಹದಂತೆ ತೋರಲೀ, ಎಲ್ಲವೂ ಒಂದೆ. ವ್ಯತಾಸವಿರುವುದು ಹೆಚ್ಚು ಕಡಿಮೆಯಲ್ಲಿ. ಆದಕಾರಣ ನಮ್ಮಷ್ಟು ಯಾರು ಅಭಿವೃದ್ಧಿಯಾಗಿಲ್ಲವೋ, ಅವರನ್ನು ನಿಕೃಷ್ಟದೃಷ್ಟಿಯಿಂದ ನೋಡಲು ನಮಗೆ ಯಾವ ಅಧಿಕಾರವೂ ಇಲ್ಲ. ಯಾರನ್ನೂ ಧಿಃಕರಿಸಬೇಡಿ. ನಿಮಗೆ ಸಹಾಯ ಮಾಡಲು ಸಾಧ್ಯವಾದರೆ ಕೈ ಎತ್ತಿ. ಇಲ್ಲದೇ ಇದ್ದರೆ ಕೈಗಳನ್ನು ಜೋಡಿಸಿ, ನಿಮ್ಮ ಸಹೋದರನಿಗೆ ಹರಸಿ. ಅವರ ದಾರಿಯನ್ನು ಅವರು ಹಿಡಿದು ನಡೆಯಲಿ. ಅವರನ್ನು ಕೆಳಗೆಳೆದು ಅಲ್ಲಗಳೆಯುವುದು ಕೆಲಸ ಮಾಡುವ ರೀತಿಯಲ್ಲ. ಈ ರೀತಿಯಲ್ಲಿ ಕೆಲಸವನ್ನು ಎಂದಿಗೂ ಸಾಧಿಸಲಾಗುವು.

ದಿಲ್ಲ. ಇನ್ನೊಬ್ಬರನ್ನು ದೂರುವುದರಲ್ಲಿ ನಮ್ಮ ಶಕ್ತಿಯನ್ನೆಲ್ಲಾ ಕಳೆಯುವ ಇನ್ನೊಬ್ಬರಲ್ಲಿ ತಪ್ಪುಕಂಡು ಹಿಡಿಯುವುದು, ಇನ್ನೊಬ್ಬರನ್ನು ಅಲ್ಲಗಳೆಯುವು ಇವುಗಳೆಲ್ಲ ನಿರರ್ಥಕ. ಎಲ್ಲರೂ ನೋಡುತ್ತಿರುವುದು ಒಂದನ್ನೇ. ಹೆಚ್ಚು ಕಡಿ ಅನುಸರಿಸುತ್ತಿರುವುದು ಒಂದೇ ಆದರ್ಶವನ್ನು. ನಮ್ಮ ಭಿನ್ನತೆಗೆ ಇ ಮುಕ್ಕಾಲುಪಾಲು ಕಾರಣವೆಲ್ಲ ಮಾತಿನ ವ್ಯತ್ಯಾಸದಲ್ಲಿ ಮಾತ್ರವೆಂಬುದು ನಮ ಗೊತ್ತಾಗುವುದು.

ಈಗ ಪಾಪವೆಂಬ ಭಾವನೆಯನ್ನು ತೆಗೆದುಕೊಳ್ಳೋಣ, ಈಗತಾನೆ ನಾ ವೇದಾಂತದ ಆದರ್ಶವನ್ನು ಹೇಳುತ್ತಿದ್ದೆ. ಅದಕ್ಕೆ ವಿರೋಧವಾದ ಭಾವನೆ ಮಾನವನನ್ನು ಪಾಪಿ ಎಂಬುದು. ಎರಡೂ ವಸ್ತುತಃ ಒಂದೆ. ಒಂದು ಆ ಮಾರ್ಗವನ್ನು ಅನುಸರಿಸುವುದು. ಮತ್ತೊಂದು ನಾಸ್ತಿ ಮಾರ್ಗವನ್ನು ಅ ಸರಿಸುವುದು. ಒಂದು ಮಾನವನಿಗೆ ಆತನ ಶಕ್ತಿಯನ್ನು ತೋರುವುದ ಮತ್ತೊಂದು ಅವನ ದುರ್ಬಲತೆಯನ್ನು ತೋರುವುದು. ದುರ್ಬಲತೆ ಇ ಬಹುದು, ಆದರೆ ಅದನ್ನು ಲೆಕ್ಕಿಸಬೇಡಿ, ನಾವು ಮುಂದುವರಿಯಬೇಕ ಎನ್ನುವುದು ವೇದಾಂತ. ಮನುಷ್ಯನು ಹುಟ್ಟಿದ ಒಡನೆಯೇ ಖಾಯಿಲೆಯ ಗೊತ್ತಾಯಿತು. ನಮ್ಮ ರೋಗವೇನೆಂಬುದನ್ನು ಹೇಳುವುದಕ್ಕೆ ಯಾ ಬೇಕಾಗಿಲ್ಲ. ಸದಾ ಕಾಲದಲ್ಲಿಯೂ ನಾವು ರೋಗದಲ್ಲಿ ನರಳುತ್ತಿರುವ ಎಂದು ಆಲೋಚಿಸಿದರೆ ಇದರಿಂದ ಗುಣವಾಗುವುದಿಲ್ಲ. ಔಷಧಿ ಅಗತ್ಯ ನಾವು ಏನನ್ನು ಬೇಕಾದರೂ ಹೊರಗೆ ಮರೆಯ ಬಹುದು. ಬಾಹ್ಯಪ್ರಪಂಚ ಕಪಟಿಗಳಾಗಬಹುದು. ಆದರೆ ನಮ್ಮ ನಿರ್ಬಲತೆ ನಮ್ಮ ಮನಸ್ಸಿನ ಅಂತರಾ ದಲ್ಲಿ ತಿಳಿದೇ ಇದೆ. ನಿರ್ಬಲತೆಯನ್ನು ಜ್ಞಾಪಿಸಿಕೊಳ್ಳುವುದರಿಂದ ಅಷ್ಟೇನ ಪ್ರಯೋಜನವಿಲ್ಲ. ಶಕ್ತಿಯನ್ನು ನೀಡಿ, ಸರ್ವದಾ ನಿರ್ಬಲತೆಯನ್ನು ಮೆಲ ಹಾಕುವುದರಿಂದ ಶಕ್ತಿ ಬರುವುದಿಲ್ಲವೆನ್ನುವುದು ವೇದಾಂತ. ನಿರ್ಬಲತೆಗೆ ಪ ಹಾರ ನಿರ್ಬಲತೆಯನ್ನು ಕುರಿತು ಆಲೋಚಿಸುವುದಲ್ಲ. ಆದರೆ ಶಕ್ತಿಯನ ಕುರಿತು ವಿಚಾರ ಮಾಡುವುದು. ಮನುಷ್ಯನಿಗೆ ಆಗಲೇ ಅವನಲ್ಲಿರುವ ಶಕ್ತಿಯ ವಿಚಾರವಾಗಿ ಬೋಧನೆಮಾಡಿ. ವೇದಾಂತ ಅವರನ್ನು ಪಾಪಿಗಳೆಂದು ಕ ಯದೆ, ಇದಕ್ಕೆ ವಿರೋಧವಾಗಿ, "ನೀವು ಶುದ್ಧರು, ಪೂರ್ಣರು, ಯಾವುದನ ಪಾಪವೆನ್ನುವಿರೋ ಅದು ನಿಮಗೆ ಸೇರಿದ್ದಲ್ಲ" ವೆನ್ನುವುದು. ಪಾಪವೆಂಬುದ ಆತ್ಮದ ಅತ್ಯಂತ ನೀಚ ಆವಿರ್ಭಾವ. ನಿಮ್ಮ ಆತ್ಮವನ್ನು ಉತ್ತಮರೀತಿಯ ಪ್ರದರ್ಶಿಸಿ. ಇದೊಂದು ನಾವು ಮನಸ್ಸಿನಲ್ಲಿಡಬೇಕಾದ ವಿಷಯ. ನಮ್ಮೆಲ್ಲರಿಗ

ಇದು ಸಾಧ್ಯ. "ಇಲ್ಲ" "ಸಾಧ್ಯವಿಲ್ಲ" ಎಂದು ಎಂದೂ ಹೇಳಬೇಡಿ. ಏಕೆಂದರೆ ನಾವು ಅನಾದಿ ಅನಂತರು. ನಿಮ್ಮ ಸಹಜ ಸ್ವಭಾವದೊಂದಿಗೆ ಹೋಲಿಸಿನೋಡಿದರೆ ಕಾಲದೇಶಗಳೂ ಕೂಡ ಗಣನೆಗೆ ಬರುವುದಿಲ್ಲ. ಏನನ್ನಾದರೂ, ಯಾವುದನ್ನಾದರೂ ನೀವು ಮಾಡಬಲ್ಲಿರಿ. ನಮ್ಮ ಶಕ್ತಿಗೆ ಮಿತಿಯಿಲ್ಲ.

ಇವು ನೀತಿಯ ತತ್ತ್ವಗಳು. ಆದರೆ ಈಗ ನಾವು ಕೆಳಗೆ ಇಳಿದು ಅದನ್ನು ವಿಶದ ಪಡಿಸೋಣ. ಈ ವೇದಾಂತದ ತತ್ತ್ವಗಳನ್ನು, ನಮ್ಮ ಅನುದಿನದ ಕಾರ್ಯ ರಂಗದಲ್ಲಿ, ನಗರ ಜೀವನದಲ್ಲಿ, ದೇಶದ ಜೀವನದಲ್ಲಿ, ಜನಾಂಗದ ಜೀವನದಲ್ಲಿ ಮತ್ತು ಪ್ರತಿಯೊಂದು ಜನಾಂಗದ ಜೀವನಾಂತರಾಳದಲ್ಲಿ, ಹೇಗೆ ಆಚರಣೆಗೆ ತರಬಹುದೆಂಬುದನ್ನು ನೋಡೋಣ. ಮನುಷ್ಯ ಯಾವ ದೇಶದಲ್ಲಾದರೂ ಇರಲೀ ಯಾವ ಕಾರ್ಯ ಕ್ಷೇತ್ರದಲ್ಲಿ ಬೇಕಾದರೂ ಇರಲೀ ಅವರಿಗೆ ಧರ್ಮಸಹಾಯ ಮಾಡದೆ ಇದ್ದರೆ, ಅದರಿಂದ ಅಷ್ಟೇನೂ ಪ್ರಯೋಜನವಿಲ್ಲ. ಕೆಲವರಿಗೆ ಅದು ಒಂದು ಸಿದ್ಧಾಂತವಾಗಿ ಮಾತ್ರ ಉಳಿಯುವುದು. ಧರ್ಮ ಮಾನವ ಜನಾಂಗಕ್ಕೆ ಸಹಕಾರಿಯಾಗಬೇಕಾದರೆ, ಮಾನವನು ಯಾವಸ್ಥಿತಿಯಲ್ಲಿದ್ದರೂ ಇರಲೀ, ಬಂಧನದಲ್ಲಿರಲೀ ಅಥವಾ ಸ್ವತಂತ್ರನಾಗಿರಲೀ, ಪಾಪದ ಆಳದಲ್ಲಿರಲೀ ಅಥವಾ ಪುಣ್ಯದ ಶಿಖರದಲ್ಲಿರಲೀ, ಎಲ್ಲಾ ಕಡೆಯಲ್ಲಿಯೂ ಒಂದೇ ಸಮನಾಗಿ ಅವನ ಸಹಾಯಕ್ಕೆ ಬರಲು ಸಿದ್ಧವಾಗಿರಬೇಕು ಮತ್ತು ಸಾಧ್ಯವಾಗಿರಬೇಕು. ಈ ವೇದಾಂತದ ತತ್ತ್ವಗಳು, ಈ ಧರ್ಮದ ಆದರ್ಶಗಳು, ಅಥವಾ ಇದನ್ನು ನೀವು ಮತ್ತಾವ ಹೆಸರಿನಿಂದಲಾದರೂ ಕರೆಯಿರಿ, ಅದು, ಈ ಮಹಾಕಾರ್ಯವನ್ನು ಸಾಧಿಸುವುದರಿಂದ ಮಾತ್ರ ಕೃತ ಕೃತ್ಯವಾಗುವುದು.

ಆತ್ಮಶ್ರದ್ಧೆಯ ಆದರ್ಶ ನಮಗೆ ಬಹಳ ಸಹಕಾರಿ. ನಮ್ಮಲ್ಲಿ ನಮಗೆ ನಂಬಿಕೆಯನ್ನು ಹೆಚ್ಚು ಬೋಧಿಸಿದ್ದರೆ, ಅದನ್ನು ಅನುಷ್ಠಾನಕ್ಕೆ ತಂದಿದ್ದರೆ, ನಮ್ಮಲ್ಲಿರುವ ಅನೇಕ ದೋಷಗಳು ಮತ್ತು ದುಃಖದ ಬಹುಭಾಗ ಮಾಯವಾಗುತ್ತಿತ್ತು ಎಂಬುದರಲ್ಲಿ ಸಂದೇಹವಿಲ್ಲ. ಮಾನವ ಇತಿಹಾಸದಲ್ಲೆಲ್ಲಾ ಪ್ರಖ್ಯಾತರಾದ ಸ್ತ್ರೀ ಪುರುಷರ ಜೀವನದಲ್ಲಿ, ಎಲ್ಲಾ ಕ್ರಿಯೋತ್ತೇಜನ ಶಕ್ತಿಗಿಂತಲೂ ಯಾವುದಾದರೊಂದು ಅತಿಪ್ರಾಮುಖ್ಯವಾಗಿದ್ದರೆ, ಅದೇ ಅವರ ಶಕ್ತಿಯಲ್ಲಿ ಅವರಿಗೆ ಇರುವ ಶ್ರದ್ಧೆ. ತಾವು ಪ್ರಖ್ಯಾತರಾಗಬೇಕೆಂಬ ಬಯಕೆಯೊಂದಿಗೆ ಜನ್ಮತಾಳಿ ಅವರು ಪ್ರಖ್ಯಾತರಾದರು. ಮನುಷ್ಯನು ಎಷ್ಟು ಕೆಳಗೆ ಸಾಧ್ಯವೋ ಅಷ್ಟು ಕೆಳಗೆ ಬೇಕಾದರೂ ಹೋಗಲಿ ಅವರಿಗೆ ಜೀವನದಲ್ಲಿ ಒಂದುಕಾಲ ಬಂದೇ ಬರುವುದು. ಆಗ ನಿರ್ವಾಹವಿಲ್ಲದೆ ನಿರಾಶೆಯಿಂದ ಪ್ರೇರೇಪಿತನಾಗಿಯೂ ಅವನು

ಮೇಲೇಳುವ ಮಾರ್ಗವನ್ನು ಅನುಸರಿಸುವನು. ಆಗ ತನ್ನಲ್ಲಿ ಶ್ರದ್ಧೆ ಇಡುವುದ
ಕಲಿತುಕೊಳ್ಳುವನು. ಅದನ್ನು ನಾವು ಮೊದಲಿನಿಂದಲೇ ತಿಳಿದಿರುವುದು ಹಿತಕ
ನಮ್ಮಲ್ಲಿ ವಿಶ್ವಾಸವನ್ನು ಪಡೆಯುವುದಕ್ಕೆ ಈ ಕಷ್ಟವನ್ನೆಲ್ಲಾ ಏತಕ್ಕೆ ಪಡೆ
ಬೇಕು? ಒಬ್ಬ ಮನುಷ್ಯನಿಗೂ ಮತ್ತೊಬ್ಬ ಮನುಷ್ಯನಿಗೂ ಇರುವ ವ್ಯತ್ಯಾಸವ
ತನ್ನಲ್ಲಿ ತನಗೆ ವಿಶ್ವಾಸವಿದೆಯೆ ಇಲ್ಲವೆ ಎಂಬುದರಮೇಲಿದೆ ಎಂದು ತೋರುವುದ
ಆತ್ಮ ವಿಶ್ವಾಸ ಎಲ್ಲವನ್ನು ಸಾಧಿಸಬಹುದು. ನನ್ನ ಜೀವನದಲ್ಲಿಯೇ ನಾನು ಅದನ
ಅನುಭವಿಸುತ್ತಿರುವೆನು. ನಾನು ಯಾವಾಗಲೂ ಅದನ್ನು ಅನುಭವಿಸುತ್ತಿರುವೆ
ನನಗೆ ವಯಸ್ಸು ಆದಂತೆಲ್ಲ ಆ ವಿಶ್ವಾಸ ಇನ್ನೂ ದೃಢವಾಗುತ್ತ ಬರುತ್ತಿ
ಯಾರಿಗೆ ಆತ್ಮವಿಶ್ವಾಸ ಇಲ್ಲವೋ ಅವನು ನಾಸ್ತಿಕ. ಪೂರ್ವಧರ್ಮಗಳು ಯಾ
ದೇವರಲ್ಲಿ ಭಕ್ತಿ ಇಲ್ಲವೋ ಅವನನ್ನು ನಾಸ್ತಿಕನೆನ್ನುತ್ತಿದ್ದವು. ನವೀನ ಧ
ಯಾರು ಆತ್ಮ ವಿಶ್ವಾಸಹೀನರೋ, ಅವರನ್ನು ನಾಸ್ತಿಕರೆಂದು ಸಾರುತ್ತದೆ. ಅ
ಇದು ಸ್ವಾರ್ಥಪರತೆಯ ಶ್ರದ್ಧೆಯಲ್ಲ. ಏಕೆಂದರೆ ವೇದಾಂತವೇ ಏಕತ್ವ
ಸಿದ್ಧಾಂತ. ಅಂದರೆ ಎಲ್ಲರಲ್ಲೂ ವಿಶ್ವಾಸವಿಡಬೇಕೆಂದು ಆಗುವುದು. ಏಕೆಂ
ನೀನೇ ಸರ್ವವೂ ಆಗಿರುವೆ. ತಮ್ಮ ಆತ್ಮಪ್ರೀತಿ ಎಂದರೆ ಎಲ್ಲರ ಮೇಲೂ ಪ್ರೀ
ಪ್ರಾಣಿಗಳು ಇರುವ ಸಚರಾಚರ ವಸ್ತುಗಳಮೇಲೂ ಪ್ರೀತಿ. ಏಕೆಂದರೆ ನಾ
ಗಳೆಲ್ಲ ಒಂದು. ಈ ಮಹಾ ವಿಶ್ವಾಸವೇ ಜಗತ್ತನ್ನು ಮೇಲಕ್ಕೆ ತರುವುದು. ಇ
ರಲ್ಲಿ ನನಗೆ ಲೇಶವೂ ಸಂದೇಹವಿಲ್ಲ. ಸತ್ಯವಾಗಿ ಯಾರು, "ಅದರ ವಿಚಾ
ವಾಗಿ ಎಲ್ಲವೂ ನನಗೆ ಗೊತ್ತಿದೆ" ಎಂದು ಹೇಳುತ್ತಾರೆಯೋ, ಅವರೇ ಶ್ರೇ
ಮಾನವರು. ತಮ್ಮ ದೇಹದ ಹಿಂದೆ ಎಷ್ಟೊಂದು ಶಕ್ತಿ ಅನೇಕರೂಪಗಳಲ್ಲಿ ಅವಿ
ಕೊಂಡಿದೆ ಎಂಬುದು ನಮಗೆ ಗೊತ್ತೆ? ಮನುಷ್ಯನಲ್ಲಿರುವುದೆಲ್ಲವನ್ನು ಯಾ
ವಿಜ್ಞಾನಿ ಸಂಪೂರ್ಣವಾಗಿ ತಿಳಿದಿರುವನು? ಮನುಷ್ಯನು ಜಗತ್ತಿಗೆ ಕಾಲಿಟ್ಟ
ಅನೇಕ ಲಕ್ಷಾಂತರ ವರುಷಗಳಾಯಿತು. ಆದರೂ ಅವನ ಅನಂತ ಶಕ್ತಿಯ
ಒಂದು ಅಣು ಮಾತ್ರ ಪ್ರಕಾಶಕ್ಕೆ ಬಂದಿರುವುದು. ಆದಕಾರಣ ನಾವು ದುರ್ಬ
ರೆಂದು ಹೇಳಿಕೊಳ್ಳಕೂಡದು. ಮೇಲೆಕಾಣುವ ಹೀನಸ್ಥಿತಿಯ ಹಿಂದೆ ಯಾ
ಮಹಾ ಕಾರ್ಯವನ್ನು ಮಾಡುವ ಸಾಧ್ಯತೆಗಳು ಅಡಗಿರುವುದೋ ನಮಗೆ ಹೇ
ಗೊತ್ತು? ನನ್ನಲ್ಲಿರುವುದರಲ್ಲಿ ನನಗೆ ಎಲ್ಲೋ ಸ್ವಲ್ಪ ಗೊತ್ತಿದೆ. ಏಕೆಂದರೆ ನ
ಹಿಂದೆ ಅನಂತ ಶಕ್ತಿಯ ಆ ಸಚ್ಚಿದಾನಂದದ ಕಡಲಿದೆ.

"ಮೊದಲು ಈ ಆತ್ಮದ ವಿಚಾರವನ್ನು ಕೇಳಬೇಕು." ನೀನು ಆತ್ಮವೆಂಬ
ದನ್ನು ಹಗಲು ರಾತ್ರಿ ಕೇಳಬೇಕು. ಹಗಲು ರಾತ್ರಿ ನನ್ನು ನಾಡಿಗಳೊಳಗೆ

ಸೇರುವ ಪರಿಯಂತರವೂ ಪ್ರತಿಯೊಂದು ರಕ್ತದ ಬಿಂದುವಿನಲ್ಲಿ ಅನುರಣಿತವಾಗುವವರೆವಿಗೂ, ನಿಮ್ಮ ಮಾಂಸದಲ್ಲಿ ಮಾಂಸವಾಗಿ, ಮೂಳೆಯಲ್ಲಿ ಮೂಳೆಯಾಗುವ ಪರಿಯಂತರವೂ ಅದನ್ನು ಮನನ ಮಾಡಬೇಕು. "ನಾನು ಜನನ ಮರಣಾತೀತನು, ಆನಂದಮಯನು, ಸರ್ವಜ್ಞನು ಸರ್ವಶಕ್ತನು, ಪರಮಪಾವನಾತ್ಮನು" ಎಂಬ ಆದರ್ಶದಿಂದ ಈ ದೇಹವೆಲ್ಲವೂ ತುಂಬಿ ತುಳುಕಾಡಲಿ. ಹಗಲಿರುಳು ಅದನ್ನೆ ವಿಚಾರಮಾಡಿ. ಅದು ನಮ್ಮ ದೇಹದಲ್ಲಿ ಐಕ್ಯವಾಗುವವರೆಗೆ ಇದನ್ನೇ ವಿಚಾರಿಸಿ. ಅದರ ಮೇಲೆ ಧ್ಯಾನ ಮಾಡಿ. ಇದರ ಪರಿಣಾಮವಾಗಿ ಧರ್ಮ ಪ್ರಕಾಶಿಸುವುದು. "ಹೃದಯ ಪೂರ್ಣವಾದಾಗ ವದನ ತೆರೆಯುವುದು." ಹೃದಯ ಪೂರ್ಣವಾಗಿ ಕೈಗಳು ಕೆಲಸವನ್ನು ಮಾಡುವುವು. ಆ ಆದರ್ಶವನ್ನು ನಿಮ್ಮ ಜೀವನದಲ್ಲಿ ನೆಲೆಗೊಳಿಸಿ. ನೀವು ಏನು ಕೆಲಸ ಮಾಡಿದರೂ ಅದರ ಮೇಲೆ ಚೆನ್ನಾಗಿ ಆಲೋಚಿಸಿ. ಆಲೋಚನೆಯ ಶಕ್ತಿ ಮಾತ್ರದಿಂದ ನಿಮ್ಮ ಕಾರ್ಯವೆಲ್ಲಾ ಬೃಹದಾಕಾರ ತಾಳುವುದು, ರೂಪ ಬದಲಾಯಿಸುವುದು. ಎಲ್ಲಾ ಪುಣ್ಯ ಕೆಲಸವಾಗುವುದು. ಜಡಕ್ಕೆ ಸ್ವಲ್ಪ ಶಕ್ತಿ ಇದ್ದರೆ ಆಲೋಚನೆ ಸರ್ವಶಕ್ತಿಯುಳ್ಳದ್ದು. ಈ ಭಾವನೆಗಳು ನಮ್ಮ ಜೀವನದ ಮೇಲೆ ಪರಿಣಾಮವನ್ನುಂಟುಮಾಡುವಂತೆ ಮಾಡಿ. ನಿಮ್ಮ ಪ್ರಭುತ್ವ, ಸಾರ್ವಭೌಮತ್ವ, ಮತ್ತು ಕೀರ್ತಿಗಳಿಂದ ನಿಮ್ಮ ಜೀವನವನ್ನು ತುಂಬಿ. ದೇವರ ದಯೆಯಿಂದ ಯಾವ ಮೂಢನಂಬಿಕೆಗಳನ್ನು ನಮ್ಮ ತಲೆಗೆ ತುಂಬದೆ ಇದ್ದರೆ! ದೇವರ ದಯೆಯಿಂದ ನಮ್ಮ ಜನ್ಮಾರಭ್ಯ ಈ ಮೂಢನಂಬಿಕೆಯ ಮತ್ತು ನಮ್ಮನ್ನು ಕುಗ್ಗಿಸುವ ನಿರ್ಬಲತೆ ಮತ್ತು ನೀಚತ್ವ ಇಂತಹ ಭಾವಗಳ ವಾತಾವರಣದಲ್ಲಿ ನಾವು ಬೆಳೆಯದೇ ಇದ್ದರೆ! ದೇವರದಯೆಯಿಂದ ಮಾನವ ವರ್ಗಕ್ಕೆ ಜೀವನದ ಪರಮೋತ್ಕೃಷ್ಟ ಆದರ್ಶಗಳನ್ನು ಪಡೆಯಲು ಸುಲಭವಾದ ಮಾರ್ಗವಿದ್ದರೆ! ಆದರೆ ಮನುಷ್ಯನು ಇವುಗಳ ಮೂಲಕವಾಗಿಯೇ ಪ್ರಯಾಣ ಮಾಡಬೇಕಾಯಿತು. ನಿಮ್ಮನಂತರ ಬರುವವರಿಗೆ ಮಾರ್ಗವನ್ನು ಅತಿ ಕಠಿಣ ಮಾಡಬೇಡಿ.

ಬೋಧಿಸುವುದಕ್ಕೆ ಕಷ್ಟವಾದ ಸಿದ್ಧಾಂತರಗಳು ಇವು ಕೆಲವು ವೇಳೆ. ಇದರ ವಿಚಾರವಾಗಿ ಅಂಜಿದವರೂ ನನಗೆ ಗೊತ್ತಿದೆ. ಆದರೆ ಯಾರು ಅನುಷ್ಠಾನಕ್ಕೆ ತರಬೇಕೆಂದು ಆಶಿಸುವರೋ, ಅವರು ಮೊದಲು ಕಲಿಯಬೇಕಾದುದು ಇದು. ನಿಮಗೆ ಅಥವಾ ಇನ್ನೂ ಯಾರಿಗಾದರೂ ಎಂದಿಗೂ ನೀವು ದುರ್ಬಲರೆಂದು ಹೇಳಬೇಡಿ. ಸಾಧ್ಯವಾದರೆ ಒಳ್ಳೆಯದನ್ನು ಮಾಡಿ. ಆದರೆ ಜಗತ್ತಿಗೆ ತೊಂದರೆಯನ್ನು ಕೊಡಬೇಡಿ. ಆತ್ಮ ನಿಂದೆ ಮಾಡಿಕೊಳ್ಳುವುದು, ಕಾಲ್ಪನಿಕ

ದೇವರೆದುರಿಗೆ ಅಳುವುದು, ಬೇಡುವುದು, ಇಂತಹ ಅನೇಕ ಸಂಕುಚಿತ ಕಾ
ಗಳು, ನಮ್ಮ ಮನಸ್ಸಿನ ಅಂತರಾಳದಲ್ಲಿ ಮೂಢ ಭಕ್ತಿ ಎಂಬುದು ಗೊತ್ತಿಗಳ
ಈ ಪ್ರಾರ್ಥನೆ ಸಫಲವಾದ ಒಂದು ದೃಷ್ಟಾಂತರವನ್ನಾದರೂ ನನಗೆ ಕೊಡ್ರಿ
ಬಂದ ಎಲ್ಲಾ ಉತ್ತರಗಳು ನಮ್ಮ ಅಂತರಾಳದಿಂದ ಹೊರ ಬಂದವು. ದೆನಂ
ಗಳಿಲ್ಲವೆಂದು ನಮಗೆ ಗೊತ್ತಿದೆ. ಆದರೆ ಕತ್ತಲೆಯಲ್ಲಿ ನೀವು ಇದ್ದ ತಕ್ಷಣ ಆ
ಮನಸ್ಸು ಸ್ವಲ್ಪ ತಲ್ಲಣಿಸುವುದು. ಇದಕ್ಕೇನು ಕಾರಣವೆಂದರೆ, ನಮ್ಮ ಬಾನವ
ದಲ್ಲಿ ಇಂತಹ ಭಯಾನಕ ಭಾವಗಳನ್ನೆಲ್ಲ ನಮ್ಮ ತಲೆಗೆ ತುಂಬಿದರು. ಅ
ಇಂತಹ ಭಾವಗಳನ್ನು, ಸಮಾಜದ ಅಂಜಿಕೆಇಂದಲಾದರೂ ಆಗಲೀ, ಸಾವಾ
ಜನಿಕರ ಅಭಿಪ್ರಾಯಕ್ಕೆ ಅಂಜಿಯಾಗಲೀ, ಸ್ನೇಹಿತರ ದ್ವೇಷವನ್ನುಗಳಿಸಬೇಹೇ
ಗುವುದು ಎಂಬ ಅಂಜಿಕೆಇಂದಲಾದರೂ ಆಗಲೀ ಅಥವಾ ನಾವು ಬಹನಿದ್ರೆ
ವಿಶ್ವಾಸದಿಂದ ಕಾಯ್ದುಕೊಂಡಿದ್ದ ಮೂಢನಂಬಿಕೆಗಳು ನಾಶವಾಗುತ್ತವೆ ಎಂಸರ್
ಆಗಲೀ, ಪರರಿಗೆ ಬೋಧಿಸಬೇಡಿ. ಇವುಗಳೆಲ್ಲದರ ಒಡೆಯುನಾಗಿ, ವಿಶ್ವನಾ
ಐಕ್ಯತ್ವ ಮತ್ತು ಆತ್ಮ ಶ್ರದ್ಧೆ ಇವುಗಳಿಗಿಂತ ಹೆಚ್ಚಾಗಿ ಬೋಧಿಸುವುದು ಏನಿತಿಳಿ
ಧರ್ಮದಲ್ಲಿ? ಕಳೆದ ಸಾವಿರಾರು ವರುಷಗಳಿಂದ ಮಾನವನ ಎಲ್ಲಾ ಕ್ರಿಯೆಯುಪ್ರ
ಈ ಒಂದು ಗುರಿಎಡೆಗಾಗಿದೆ. ಜನಾಂಗ ಇಂದುಕೂಡ ಅದಕ್ಕೆ ಪ್ರಯತ್ನಿಸದನ
ತ್ತಿರುವುದು. ಈಗ ನಿಮ್ಮ ಸರದಿ. ನಿಮಗೆ ಸತ್ಯ ಗೊತ್ತಿದೆ. ಏಕೆಂದಹೇ
ಹಲವು ಕಡೆಗಳಲ್ಲಿ ಇದನ್ನು ಬೋಧಿಸಿದೆ. ತತ್ತ್ವಶಾಸ್ತ್ರ, ಮಾನಸಿಕಶಾಗಕ್ಕೆ
ಒಂದೆ ಅಲ್ಲ, ವಸ್ತುಶಾಸ್ತ್ರ ಕೂಡ ಇದನ್ನು ಸಾರಿವೆ. ಈ ವಿಶ್ವದ ಏಕತ್ವವನಜೀ
ಒಪ್ಪಿಕೊಳ್ಳಲು ಅಂಜುವ ವಿಜ್ಞಾನಿ ಎಲ್ಲಿರುವನು? ಜಗತ್ತುಗಳ ವಿಚಾರವಾ
ಮಾತನಾಡುವ ಧೈರ್ಯ ಯಾರಿಗೆ ಇದೆ? ಇವುಗಳೆಲ್ಲ ಮೂಢನಂಬಿಕೆ. ಇರುಪ್ರ
ಜೀವನ ಒಂದು. ಇರುವ ಜಗತ್ತು ಒಂದು. ಈ ಒಂದು ಜೀವನ ಒಂದಸರಿ
ಜಗತ್ತೆ ನಮಗೆ ಅನೇಕವಾಗಿ ಕಾಣುತ್ತಿವೆ. ಈ ಅನೇಕ ಒಂದು ಸ್ವಪ್ನದಂತಿಳಿ
ನೀವು ಸ್ವಪ್ನದಲ್ಲಿರುವಾಗ ಒಂದು ಸ್ವಪ್ನ ಜಾರುವುದು, ನಂತರ ಮತ್ತೊಂದಸರು
ಬರುವುದು. ನೀವು ನಿಮ್ಮ ಕನಸಿನಲ್ಲಿ ಜೀವಿಸುವುದಿಲ್ಲ. ಕನಸುಗಳು ಒಂದಾದ್ವೈ
ಮೇಲೊಂದು ಬರುವುವು. ಒಂದು ದೃಶ್ಯವಾದಮೇಲೆ ಮತ್ತೊಂದು ದೃವುದ
ನಿಮ್ಮಮುಂದೆ ಬರುವುದು. ತೊಂಬತ್ತರಷ್ಟು ದುಃಖ ಹತ್ತರಷ್ಟು ಸುಖವಿರುಶಕ್
ಈ ಜಗತ್ತಿನಲ್ಲಿ ಬಹುಶಃ ಕೆಲವು ಕಾಲದಮೇಲೆ ಶೇಕಡ ತೊಂಬತ್ತರಷ್ಟು ಸುಃ
ವಾಗಿ ಕಾಣಬಹುದು. ಅದನ್ನು ಆಗ ಸ್ವರ್ಗವೆನ್ನುತ್ತೇವೆ. ಇವುಗಳೆಲ್ಲ ಮಾಯಮು
ವಾಗುವ ಒಂದು ಸಮಯ ಮಹಾತ್ಮನಿಗೆ ಬರುತ್ತದೆ. ಈ ಪ್ರಪಂಚವೇ ದೇವರಂ ಒಂ

ಕಾಣುವುದು. ತನ್ನಾತ್ಮವೇ ದೇವರಾಗುವುದು. ಆದಕಾರಣ ಅನೇಕ ಪ್ರಪಂಚಗಳೂ ಇಲ್ಲ ಅನೇಕ ಜೀವಗಳೂ ಇಲ್ಲ. ಈ ಅನೇಕವೆಲ್ಲವೂ ಆ ಏಕದರ ಆವಿರ್ಭಾವನೆ. ಆ ಏಕವೆ ಅನೇಕದಂತೆ, ವಸ್ತು, ಆತ್ಮ ಆಲೋಚನೆ ಮನಸ್ಸಿನಂತೆ ಕಾಣಿಸಿಕೊಳ್ಳುತ್ತದೆ. ಅನೇಕದಂತೆ ತೋರುತ್ತಿರುವುದು ಅದೊಂದೆ. ಆದಕಾರಣ ನಾವು ಮೊದಲು ಮಾಡಬೇಕಾದುದೆ ಆ ಸತ್ಯವನ್ನು ಇತರರಿಗೆ ಮತ್ತು ನಮಗೆ ಬೋಧಿಸಿಕೊಳ್ಳುವುದು.

ಈ ಆದರ್ಶ ಜಗತ್ತಿನಲ್ಲಿ ಅನುರಣಿತವಾಗಲಿ. ಮೂಢನಂಬಿಕೆ ಮಾಯವಾಗಲಿ. ಯಾರು ನಿರ್ಬಲರೋ ಅವರಿಗೆ ಹೇಳಿ. ಬಿಡದೆ ಒತ್ತಿ ಒತ್ತಿ ಹೇಳಿ. ಶುದ್ಧಾತ್ಮನು ನೀನು. ಜಾಗ್ರತನಾಗು ಏಳು. ಹೆ! ಸರ್ವಶಕ್ತನೆ ನಿದ್ರೆ ನಿನಗೆ ತರವಲ್ಲ. ದುಃಖಿಯೆಂದೂ ಹೀನನೆಂದೂ ನೀನು ಆಲೋಚಿಸದಿರು. ಸರ್ವಶಕ್ತನೆ ಏಳು, ಜಾಗ್ರತನಾಗು, ನಿನ್ನ ಸ್ವಭಾವವನ್ನು ಪ್ರಕಟಪಡಿಸು. ನಾನು ಪಾಪಿಯೆಂದು ತಿಳಿಯುವುದು ನಿನಗೆ ತರವಲ್ಲ. ನಿರ್ಬಲನು ನೀನೆಂದು ತಿಳಿಯುವುದೇ ನಿನಗೆ ತರವಲ್ಲ. ಇದನ್ನು ನಿಮ್ಮ ಮನಸ್ಸಿಗೆ ಹೇಳಿಕೊಳ್ಳಿ. ಪ್ರಪಂಚಕ್ಕೆ ಸಾರಿ. ಎಂತಹ ಒಂದು ಅನುಷ್ಠಾನಿಕ ಪ್ರತಿಫಲ ಬರುತ್ತದೆಂಬುದನ್ನು ನೋಡಿ. ವಿದ್ಯುದ್ವೇಗದಿಂದ ಹೇಗೆ ಎಲ್ಲವೂ ವ್ಯಕ್ತವಾಗುವುದೆಂಬುದನ್ನು ಹೇಗೆ ಎಲ್ಲವೂ ಬದಲಾವಣೆಯಾಗುವುದೆಂಬುದನ್ನು ನೋಡಿ. ಇದನ್ನು ಜನಾಂಗಕ್ಕೆ ಸಾರಿ. ಅವರ ಶಕ್ತಿಯನ್ನು ಅವರಿಗೆ ತೋರಿ. ಆಗ ಅದನ್ನು ನಮ್ಮ ನಿತ್ಯಜೀವನದಲ್ಲಿ ಹೇಗೆ ಅನ್ವಯಿಸಿಕೊಳ್ಳಬೇಕೆಂಬುದನ್ನು ಕಲಿತುಕೊಳ್ಳುತ್ತೇವೆ.

ನಾವು ವಿವೇಕವೆಂಬುದನ್ನು ಉಪಯೋಗಿಸಬೇಕಾದರೆ, ನಮ್ಮ ಜೀವನದ ಪ್ರತಿಯೊಂದು ಗಳಿಗೆಯಲ್ಲೂ, ನಮ್ಮ ಪ್ರತಿಯೊಂದು ಕಾರ್ಯದಲ್ಲೂ, ಯಾವುದು ಸರಿ ಯಾವುದು ತಪ್ಪು ಎಂಬುದನ್ನು ವಿಮರ್ಶಿಸಬೇಕಾದರೆ, ಸತ್ಯದಪರೀಕ್ಷೆ ನಮಗೆ ತಿಳಿದಿರಬೇಕು. ಅದೇ ಪರಿಶುದ್ಧತೆ ಮತ್ತು ಏಕತ್ವ. ಐಕ್ಯತೆಗೆ ಯಾವುದು ಸಹಾಯಮಾಡುವುದೊ ಅದೆಲ್ಲವೂ ಸತ್ಯ. ಪ್ರೀತಿಯೆ ಸತ್ಯ. ದ್ವೇಷವೇ ಅಸತ್ಯ. ದ್ವೇಷವೇ ಭಿನ್ನತೆಗೆ ಮೂಲ. ಒಬ್ಬನಿಂದ ಒಬ್ಬ ಮಾನವನನ್ನು ಪ್ರತ್ಯೇಕಪಡಿಸುವುದೇ ದ್ವೇಷ. ಆದಕಾರಣ ಇದು ತಪ್ಪು ಮತ್ತು ಅಸತ್ಯ. ಇದು ಬೇರ್ಪಡಿಸುವ ಶಕ್ತಿ. ಇದು ಪ್ರತ್ಯೇಕಗೊಳಿಸಿ ನಾಶಮಾಡುವುದು.

ಪ್ರೇಮ ಒಂದುಗೂಡಿಸುತ್ತದೆ. ಐಕ್ಯತೆಗೆ ಕಾರಣವಾಗುತ್ತದೆ. ತಾಯಿ ಮಕ್ಕಳೊಂದಿಗೆ, ಮನೆಗಳು ನಗರದೊಂದಿಗೆ, ಪ್ರಾಣಿಗಳೊಂದಿಗೆ ವಿಶ್ವವೇ ಒಂದಾಗುತ್ತದೆ. ಪ್ರೇಮವೇ ಜೀವನ. ಅದೇ ಪ್ರತ್ಯಕ್ಷ ದೇವರು. ಹೆಚ್ಚು

ಕಡಿಮೆ ಪ್ರಕಾಶಕ್ಕೆ ಬಂದ ಆ ವೈವಿಧ್ಯತೆಗಳೆಲ್ಲವೂ ಪ್ರೇಮದ ಆವಿರ್ಭಾ
ವ್ಯತ್ಯಾಸವಿರುವುದು ತರತಮದಲ್ಲಿ ಮಾತ್ರ. ಎಲ್ಲಾ ಕಡೆಯಲ್ಲಿಯೂ ಆ ಪ್ರೆ
ವೊಂದೇ ಬೆಳೆಗುತ್ತಿರುವುದು. ಆದಕಾರಣ ನಮ್ಮ ಕೆಲಸದಲ್ಲಿ ಇದು ಭಿನ್ನ
ಸಹಾಯ ಮಾಡುತ್ತದೆಯೇ ಅಥವಾ ಐಕ್ಯತೆಗೆ ಸಹಾಯ ಮಾಡುತ್ತದೆ
ನೋಡಬೇಕು. ಭಿನ್ನತೆಗೆ ಮೂಲವಾದರೆ ಅದನ್ನು ತ್ಯಜಿಸಬೇಕು. ಐಕ್ಯ
ಸಹಾಯವಾದರೆ ಅದು ಒಳ್ಳೆಯದೆಂಬುದು ನಿಜ. ಅದರಂತೆಯೇ ನಮ್ಮ ಆ
ಚನೆಗಳೂ ಕೂಡ, ಅದು ವಿಭಾಗಮಾಡುವುದೋ ಅಥವಾ ಒಂದುಗೂಡಿಸು
ಮಾಡುವುದೊ ಏಕ ಅಭಿಪ್ರಾಯವು ನೆಲೆಸುವಂತೆ ಮಾಡುವುದೋ, ನೋಡಬೆ
ಇದನ್ನು ಅದು ಸಾಧಿಸಿದರೆ ಸ್ವೀಕರಿಸುತ್ತೇವೆ. ಇಲ್ಲದೇ ಇದ್ದರೆ ಘೋರಪಾಪ
ಅದನ್ನು ಹೊರದೂಡುತ್ತೇವೆ.

ನೀತಿಯ ಭಾವನೆ ತನಗೆ ತಿಳಿಯಲಾರದ ಯಾವುದರ ಆಧಾರದಮೇ
ನಿಂತಿಲ್ಲ. ನಮಗೆ ತಿಳಿಯಲಾರದ ಯಾವುದನ್ನು ನಮಗೆ ಅದು ಬೋಧಿ
ದಿಲ್ಲ. ಉಪನಿಷತ್ತಿನ ವಾಣಿಯಲ್ಲಿ, "ಯಾವ ದೇವರನ್ನು ನಾವು ತಿಳಿಯ
ದವರೆಂದು ಇಲ್ಲಿ ಪೂಜಿಸುತ್ತೇವೆಯೋ, ಅದೇ ದೇವರನ್ನೆ ನಾನು ನಿ
ಬೋಧಿಸುತ್ತೇನೆ." ನಿಮಗೆ ಏನು ತಿಳಿಯಬೇಕಾದರೂ ಅದು ಆತ್ಮನ ಮೂ
ನಾನು ಒಂದು ಕುರ್ಚಿಯನ್ನು ನೋಡುತ್ತೇನೆ. ಆದರೆ ನಾನು ಅದನ್ನು ನೆ
ಬೇಕಾದರೆ ಮೊದಲು ನನ್ನನ್ನು ನಾನು ತಿಳಿಯಬೇಕು, ನಂತರ ಕುರ್ಚಿಯ
ನಾನು ತಿಳಿಯಬೇಕು. ಆತ್ಮನಲ್ಲಿ ಆತ್ಮನಮೂಲಕ ಮಾತ್ರ ನಾವು ಪ
ಯನ್ನು ಗ್ರಹಣ ಮಾಡುತ್ತೇವೆ. ನೀನು ನನಗೆ ಗೊತ್ತಾಗುವುದು, ಪ್ರಪಂಚ
ತಿಳಿಯುವುದು ಆತ್ಮನಲ್ಲಿ ಆತ್ಮನಮೂಲಕ. ಆದಕಾರಣ ಆತ್ಮನನ್ನು ತಿ
ಲಾರದವನೆಂದು ಹೇಳುವುದರಲ್ಲಿ ಅರ್ಥವಿಲ್ಲ. ಆತ್ಮನನ್ನು ಬೇರೆ ಮಾ
ಪ್ರಪಂಚವೇ ಮಾಯವಾಗುವುದು. ಎಲ್ಲಾ ಜ್ಞಾನ ಬರುವುದು ಆತ್ಮ
ಆತ್ಮದ ಮೂಲಕ. ಆದಕಾರಣ ಇದು ಎಲ್ಲಕ್ಕಿಂತ ಹೆಚ್ಚಾಗಿ ತಿಳಿದ ವ
ಯಾವುದನ್ನು "ನಾನು" ಎಂದು ಹೇಳುತ್ತೇನೆಯೋ ಅದೇ "ನೀನು."
ಅಹಂಕಾರ ನಿನ್ನ ಅಹಂಕಾರ ಹೇಗೆ ಆಗುವುದೆಂದು ನೀವು ಆಶ್ಚರ್ಯ ಪಡಬಹು
ಆದರೆ ಸತ್ಯಾಂಶವೇ ಇದು. ಮಿತಿಇರುವುದು ಕೇವಲ ತೋರಿಕೆಗೆ. ಅ
ಮಿತಿಯಾದಂತೆ ಕಾಣಿಸುವುದು. ಅದರಲ್ಲಿ ಅಲ್ಪಭಾಗ ನಾನೆಂಬ ಅಹಂ
ದಂತೆ ಕಾಣುತ್ತಿರುವುದು. ಅನಂತ ಎಂದಿಗೂ ಸಾಂತವಾಗಲಾರದು.
ಒಂದು ಕಲ್ಪನೆ. ಆದಕಾರಣ ನಮ್ಮಲ್ಲಿ ಪ್ರತಿಯೊಬ್ಬನಿಗೂ, ಗಂಡಸಿಗೆ,

ಸಿಗೆ ಅಥವಾ ಮಗುವಿಗೆ ಮತ್ತು ಎಲ್ಲಾ ಪ್ರಾಣಿಗಳಿಗೂ ಈ ಆತ್ಮ ತಿಳಿದಿರುವುದು. ಆತ್ಮನ ಜ್ಞಾನವಿಲ್ಲದೆ ನಾವು ಬದುಕಲಾರೆವು, ಚಲಿಸಲಾರೆವು, ವ್ಯಕ್ತಿತ್ವವಿರಲಾರದು. ಈ ಪರಮಾತ್ಮನನ್ನು ನಾವು ತಿಳಿಯಲಾರದೆ ಉಸಿರಾಡಲಾರೆವು. ಒಂದು ಕ್ಷಣವಾದರೂ ಬದುಕಿರಲಾರೆವು. ಎಲ್ಲಾ ದೇವರಿಗಿಂತಲೂ ಹೆಚ್ಚು ಪರಿಚಿತನು ವೇದಾಂತದ ದೇವರು. ಇದು ನಮ್ಮ ಕಲ್ಪನೆಯ ಪ್ರತಿಫಲವಲ್ಲ.

ಇದೇ ಅನುಷ್ಠಾನಕ್ಕೆ ಯೋಗ್ಯವಾದ ದೇವರ ಬೋಧನೆ ಅಲ್ಲದೇ ಇದ್ದರೆ ಬೇರೆ ಹೇಗೆ ಅನುಷ್ಠಾನ ಯೋಗ್ಯವಾದ ದೇವರನ್ನು ಬೋಧಿಸುವುದು? ನನ್ನ ಕಣ್ಣ ಮುಂದೆ ಕಾಣುವ ಸರ್ವವ್ಯಾಪಿಯಾದ, ನಮ್ಮ ಇಂದ್ರಿಯಗಳಿಗಿಂತಲೂ ಸತ್ಯವಾದ ದೇವರಿಗಿಂತಲೂ ಅನುಷ್ಠಾನ ಯೋಗ್ಯವಾದ ದೇವರು ಮತ್ತೊಂದು ಎಲ್ಲಿರುವುದು? ಏಕೆಂದರೆ ಸರ್ವವ್ಯಾಪಿಯಾದ ಸರ್ವಶಕ್ತನಾದ ನಿಮ್ಮ ಆತ್ಮದ ಆತ್ಮವಾದ ದೇವರೇ ನೀನು. ನೀನು ಅದಲ್ಲವೆಂದರೆ ನಾನು ಸುಳ್ಳು ಹೇಳುತ್ತೇನೆ. ಸರ್ವಕಾಲದಲ್ಲಿಯೂ ನಾನು ಅದನ್ನು ಅನುಭವಿಸುತ್ತೇನೆಯೋ ಇಲ್ಲವೋ ಅದಿರಲಿ. ಅಂತೂ ನನಗೆ ಅದರ ಸತ್ಯ ಗೊತ್ತಿದೆ. ಆತನೆ ಏಕ, ಎಲ್ಲದರ ಮೊತ್ತ ಎಲ್ಲಾ ಜೀವನದ ಎಲ್ಲಾ ಅಸ್ತಿತ್ವದ ಸತ್ಯ.

ವೇದಾಂತದ ನೈತಿಕ ಆದರ್ಶಗಳನ್ನು ವಿವರಿಸಬೇಕಾಗಿದೆ. ಆದಕಾರಣ ನಿಮಗೆ ಸ್ವಲ್ಪ ತಾಳ್ಮೆ ಇರಬೇಕು. ನಾನು ನಿಮಗೆ ಹೇಳಿದಂತೆ ವಿಶದವಾಗಿ ಈ ವಿಷಯವನ್ನು ತೆಗೆದುಕೊಂಡು ಕೂಲಂಕಷವಾಗಿ ವಿಚಾರಿಸಬೇಕಾಗಿದೆ. ಬಹಳ ಕೆಳಗಿನ ಆದರ್ಶಗಳಿಂದ ಭಾವಗಳು ಬೆಳೆದು, ಹೇಗೆ ಒಂದು ಏಕತ್ವದ ಮಹಾ ಆದರ್ಶವಾಗಿ ವಿಶ್ವಪ್ರೇಮದ ರೂಪವನ್ನು ತಾಳಿದೆ ಎಂಬುದನ್ನು ನೋಡಬೇಕು. ನಾವು ಅಪಾಯದಿಂದ ಪಾರಾಗಬೇಕಾದರೆ ಇವನ್ನು ತಿಳಿಯಬೇಕು. ಕೆಳಗಿನ ಮೆಟ್ಟಲಿನಿಂದಲೂ ಅದನ್ನು ರೂಢಿಸುವುದಕ್ಕೆ ಪ್ರಪಂಚಕ್ಕೆ ಕಾಲ ಸಿಕ್ಕುವುದಿಲ್ಲ. ನಾವು ಮೇಲೆ ನಿಂತು ನಮ್ಮ ತರುವಾಯ ಬರುವವರಿಗೆ ಸತ್ಯವನ್ನು ಕೊಡುವುದಕ್ಕೆ ಆಗದೇ ಇದ್ದರೆ ಪ್ರಯೋಜನವೇನು? ಆದಕಾರಣ ಅವುಗಳನ್ನು ಅಮೂಲಾಗ್ರವಾಗಿ ತಿದ್ದುಕೊಳ್ಳುವುದು ಉತ್ತಮ. ಬುದ್ಧಿವಂತಿಕೆ ಏನೂ ಅಷ್ಟುಪ್ರಯೋಜನವಲ್ಲವೆಂದು ತಿಳಿದಿದ್ದರೂ ಮೊದಲು ಬುದ್ಧಿಗೆ ಸಂಬಂಧಪಟ್ಟ ಭಾಗವನ್ನು ಪರಿಶೀಲಿಸುವುದು ಅತ್ಯಾವಶ್ಯಕ. ಏಕೆಂದರೆ ಬಹಳ ಮುಖ್ಯವಾದುದು ಭಾವನೆ ಅಥವಾ ಹೃದಯ. ಹೃದಯದ ಮೂಲಕ ನಾವು ಭಗವಂತನನ್ನು ನೋಡುವುದು, ಪಾಂಡಿತ್ಯದ ಮೂಲಕವಲ್ಲ. ಬುದ್ಧಿ ದಾರಿಯನ್ನು ಗುರ್ತಿಸುವವನು. ನಮಗೋಸುಗವಾಗಿ ದಾರಿಯನ್ನು ಚೊಕ್ಕಟ ಮಾಡುವವನು.

ಅಷ್ಟೇನು ಮುಖ್ಯವಾದ ಕೆಲಸಗಾರನಲ್ಲ. ಅದು ಪೋಲೀಸಿನವನಂತೆ. ಸಮಾ
ನಿರ್ವಹಣೆಗೆ ಪೋಲೀಸಿನವನು ಅನಿವಾರ್ಯ. ದೊಂಬಿಯನ್ನು ನಿಲ್ಲಿಸು
ತಪ್ಪು ಮಾಡಿದವರನ್ನು ಹಿಡಿಯುವುದು, ಇವುಗಳು ಮಾತ್ರ ಅವನ ಕೆ
ಬುದ್ಧಿ ಮಾಡಬೇಕಾದ ಕೆಲಸವೂ ಅಷ್ಟೆ. ಪಾಂಡಿತ್ಯದ ಗ್ರಂಥವನ್ನು
ವಾಗ, ಅವುಗಳೆಲ್ಲವನ್ನು ಗ್ರಹಿಸಿ ಆದಮೇಲೆ, "ಭಗವಂತನಿಗೆ ಜಯವಾ
ಸತ್ಯಕ್ಕೆ ನಾನು ಅವುಗಳಿಂದ ಪಾರಾಗಿರುವೆನು" ಎಂದು ನೀವು ಯೋಚಿಸು
ಏಕೆಂದರೆ ಬುದ್ಧಿಗೆ ಕಣ್ಣಿಲ್ಲ. ತನ್ನಷ್ಟಕ್ಕೆ ತಾನೆ ಚಲಿಸಲಾರದು. ಅದಕ್ಕೆ ಕೈಗ
ಇಲ್ಲ, ಕಾಲುಗಳೂ ಇಲ್ಲ. ವಿದ್ಯುತ್ ಅಥವಾ ಮತ್ತಾವುದಾದರೂ ಇಂತಹ
ಗಿಂತ ವೇಗವಾಗಿ ಚಲಿಸಿ ಕೆಲಸಮಾಡುವುದೇ ಭಾವನೆ. ನೀನು ಹಾಗೆ ಅನುಭವಿ
ಯೇನು ?–ಅದೇ ಪ್ರಶ್ನೆ. ಹಾಗೆ ಅನುಭವಿಸಿದರೆ ನೀನು ದೇವರನ್ನು ನೋಡು
ಇಂದು ನಿನ್ನಲ್ಲಿರುವ ಆ ಭಾವನೆ ಪ್ರಬಲವಾಗುವುದು. ಅದೇ ಪವಿತ್ರ
ವುದು. ಎಲ್ಲವನ್ನು ಅನುಭವಿಸುವ, ಎಲ್ಲದರಲ್ಲಿಯೂ ಏಕತ್ವವನ್ನು ಕಂ
ದೇವರನ್ನು ತನ್ನಲ್ಲಿ ಕಂಡು ಇತರರಲ್ಲಿ ಕಾಣುವ ಮಹೋನ್ನತ ಪೀಠಕ್ಕೆ ಕೊ
ಯ್ಯುವುದೇ ಭಾವನೆ. ಬುದ್ಧಿ ಅದನ್ನು ಎಂದಿಗೂ ಮಾಡಲಾರದು. "
ತ್ಕಾರವಾಗಿ ಮಾತನಾಡುವ ನಾನಾ ವಿಧಾನಗಳು, ಶಾಸ್ತ್ರಗಳಿಗೆ ನಾನಾರೀ
ವ್ಯಾಖ್ಯಾನ ಮಾಡುವುದು ಇವು ಕೇವಲ ಪಂಡಿತರ ಮನೋರಂಜನೆಗೆ ಮಾ
ಜೀವಿಯ ಮುಕ್ತಿಗಲ್ಲ."

ನಿಮ್ಮಲ್ಲಿ ಯಾರು ಥಾಮಸ್ ಎ. ಕೆಂಪಿಸ್ Imitation of Chr
ಗ್ರಂಥವನ್ನು ಓದಿರುವಿರೋ ಅವರಿಗೆ ಆತನು ಹೇಗೆ ಪ್ರತಿಯೊಂದು
ದಲ್ಲಿಯೂ ಇದನ್ನು ಒತ್ತಿ ಹೇಳುತ್ತಾನೆ ಎಂಬುದು ಗೊತ್ತಿದೆ. ಪ್ರಪಂಚ
ಪ್ರತಿಯೊಬ್ಬ ದೇವಭಕ್ತನೂ ಕೂಡ ಒತ್ತಿ ಹೇಳುವುದೇ ಇದನ್ನು. ಬುದ್ಧಿ
ಶ್ಯಕ. ಏಕೆಂದರೆ ಇದು ಇಲ್ಲದೇ ಇದ್ದರೆ ನಾವು ಅನೇಕ ಮೂಢನಂ
ಬೀಳುತ್ತೇವೆ. ಎಷ್ಟೋ ತಪ್ಪುಗಳನ್ನು ಮಾಡುತ್ತೇವೆ. ಬುದ್ಧಿ ಇ
ತಡೆಯುತ್ತದೆ. ಇದಕ್ಕಿಂತ ಹೆಚ್ಚಿನದನ್ನು ಆಶಿಸಬೇಡಿ. ಇದು ಅಚೇತನ
ಅಷ್ಟೇನೂ ಪ್ರಾಮುಖ್ಯವಲ್ಲದ ಸಹಾಯ. ನಿಜವಾದ ಸಹಾಯವೇ ಭಾ
ಪ್ರೀತಿ. ಮತ್ತೊಬ್ಬರಿಗಾಗಿ ನೀನು ವ್ಯಥೆ ಪಡುತ್ತಿಯೇನು ? ನೀನು ಹಾಗೆ
ಐಕ್ಯತೆಯಲ್ಲಿ ಮುಂದುವರಿದಿರುವೆ. ಇನ್ನೊಬ್ಬರಿಗೆ ನೀನು ವ್ಯಥೆಪಡದೆ ಇ
ನೀನು ಪ್ರಪಂಚದಲ್ಲಿ ಇದುವರೆವಿಗೂ ಹುಟ್ಟದ ಘನ ಪಂಡಿತನಾಗಿರಬಹು
ಆದರೆ ಇವುಗಳಿಂದ ನಿನಗೆ ಏನೂ ಪ್ರಯೋಜನವಿಲ್ಲ. ನಿನ್ನದು ಕೇವಲ

ಪಾಂಡಿತ್ಯ. ನೀನು ಮುಂದೆಯೂ ಹಾಗೆಯೇ ಇರುವೆ. ನೀನು ಭಾವ ಜೀವಿಯಾದರೆ, ನಿನಗೆ ಯಾವ ಪುಸ್ತಕವನ್ನು ಓದುವುದಕ್ಕೆ ಆಗದೆ ಇದ್ದರೂ, ಭಾಷಾ ಜ್ಞಾನವೇ ಇಲ್ಲದೇ ಇದ್ದರೂ, ಸರಿಯಾದ ಮಾರ್ಗದಲ್ಲಿರುವೆ. ದೇವರು ನಿನ್ನ ವಸು.

ಜಗದ ಇತಿಹಾಸದಿಂದ ಮಹಾ ಪುರುಷರ ಶಕ್ತಿ ಎಲ್ಲಿರುವುದು ಎಂಬುದು ಗೊತ್ತಿಲ್ಲವೆ? ಅದು ಎಲ್ಲಿತ್ತು? ಅವರ ಪಾಂಡಿತ್ಯದಲ್ಲಿತ್ತೇನು? ಅವರಲ್ಲಿ ಯಾರಾದರೂ ಸೂಕ್ಷ್ಮ ತರ್ಕದಮೇಲೆ ಮತ್ತು ತತ್ತ್ವಗ್ರಂಥದಮೇಲೆ ಚಮತ್ಕಾರವಾದ ಪುಸ್ತಕವನ್ನು ಬರೆದರೆ? ಅವರಲ್ಲಿ ಒಬ್ಬರೂ ಇಲ್ಲ. ಅವರೆಲ್ಲೊ ಸ್ವಲ್ಪ ಮಾತನಾಡಿದರು. ಕ್ರಿಸ್ತನಂತೆ ನೀವು ಭಾವಿಸಿದರೆ ಕ್ರಿಸ್ತರಾಗುವಿರಿ. ಬುದ್ಧನಂತೆ ಭಾವಿಸಿದರೆ ಬುದ್ಧರಾಗುವಿರಿ. ಭಾವನೆಯೇ ಜೀವ ಶಕ್ತಿ ಮತ್ತು ಪೌರುಷ. ಇದಲ್ಲದೆ ಪಾಂಡಿತ್ಯದ ಕಸರತ್ತು ಎಷ್ಟಿದ್ದರೂ ದೇವರನ್ನು ಸೇರುವುದಕ್ಕೆ ಆಗುವುದಿಲ್ಲ. ಚಲನೆಗೆ ಶಕ್ತಿಯಿಲ್ಲದ ಅಂಗದಂತೆ ಬುದ್ಧಿ. ಭಾವ ಪ್ರವೇಶಿಸಿ ಚಲನೆಕೊಟ್ಟಾಗಲೇ ಅವು ಚಲಿಸಿ ಬೇರೆ ವಸ್ತುವಿನ ಮೇಲೆ ಪರಿಣಾಮವನ್ನುಂಟುಮಾಡುವುದು. ಜಗದಲ್ಲೆಲ್ಲಾ ಇರುವುದು ಹಾಗೆಯೆ. ನೀವು ಯಾವಾಗಲೂ ಜ್ಞಾಪದಲ್ಲಿಟ್ಟುಕೊಂಡಿರಬೇಕಾದ ವಿಷಯ ಇದು. ವೇದಾಂತದ ನೀತಿಯಲ್ಲಿ ಇದು ಒಂದು ಬಹಳ ಅನುಷ್ಠಾನ ಯೋಗ್ಯವಾದ ವಿಷಯ. ನೀವೆಲ್ಲರೂ ಮಹಾಪುರುಷರು, ಮಹಾಪುರುಷಾರಾಗಲೇಬೇಕು ಎಂಬುದೇ ವೇದಾಂತದ ಬೋಧನೆ. ನಿಮ್ಮ ನಡತೆಗೆ ಪ್ರಮಾಣ ಶಾಸ್ತ್ರವಲ್ಲ, ನೀವೇ ಶಾಸ್ತ್ರಕ್ಕೆ ಪ್ರಮಾಣ. ಒಂದು ಗ್ರಂಥ ಸತ್ಯವನ್ನು ಬೋಧಿಸುತ್ತದೆ ಎಂಬುದು ಹೇಗೆ ಗೊತ್ತು? ಏಕೆಂದರೆ ನೀನೆ ಸತ್ಯ. ಅದನ್ನು ಮನಗಾಣುವೆ; ವೇದಾಂತ ಹೇಳುವುದೇ ಅದನ್ನು. ಪ್ರಪಂಚದ ಕ್ರಿಸ್ತ ಮತ್ತು ಬುದ್ಧರಿಗೆ ಪ್ರಮಾಣ ಯಾವುದು? ನಾನು ಮತ್ತು ನೀವು ಅವರಂತೆ ಭಾವಿಸುವುದೆ. ಹೀಗೆಯೆ ಅವರು ನಿಜವೆಂದು ನಾನು ಮತ್ತು ನೀವು ಕಾಣುವುದು. ಅವರ ಆತ್ಮದ ಮಹತ್ವಕ್ಕೆ ನಮ್ಮ ಆತ್ಮದ ಮಹತ್ವವೇ ಸಾಕ್ಷಿ. ನಿಮ್ಮ ದೇವತ್ವವೇ ದೇವರಿಗೆ ಪ್ರಮಾಣ. ನೀನು ಒಬ್ಬ ಮಹಾ ಪುರುಷನಲ್ಲದೇ ಇದ್ದರೆ ದೇವರ ವಿಚಾರವಾಗಿ ಸತ್ಯವಾದುದು ಯಾವುದೂ ಇಲ್ಲ. ನೀನು ದೇವರಲ್ಲದೇ ಇದ್ದರೆ ಮತ್ತಾವ ದೇವರೂ ಎಂದೂ ಇರಲಿಲ್ಲ, ಮುಂದೆಯೂ ಇರುವುದಿಲ್ಲ. ಇದೇ ನಾವು ಅನುಸರಿಸಬೇಕಾದ ಆದರ್ಶವೆಂದು ವೇದಾಂತ ಸಾರುವುದು. ನಮ್ಮಲ್ಲಿ ಪ್ರತಿಯೊಬ್ಬರೂ ಕೂಡ ದೇವಾಂಶ ಪುರುಷರಾಗಬೇಕು. ನೀವು ಆಗಲೇ ಅದಾಗಿರು

ವಿರಿ. ಅದನ್ನು ನೀವು ತಿಳಿದುಕೊಳ್ಳಬೇಕಷ್ಟೆ. ಆತ್ಮನಿಗೆ ಅಸಾಧ್ಯವಾದುದು ಏನಾದರಿದೆ ಎಂದು ಎಂದೂ ತಿಳಿಯಬೇಡಿ. ಹಾಗೆ ಹೇಳುವುದೇ ನಾಸ್ತಿಕತ್ವ; ಪಾಪವೇನಾದರೂ ಇದ್ದರೆ, ನೀವು ನಿರ್ಬಲರೆಂದೂ ಉಳಿದವರು ನಿರ್ಬಲರೆಂದೂ ಹೇಳುವುದೇ ಮಹಾಪಾತಕ.



## ಅಧ್ಯಾಯ ೨

ಹುಡುಗನೊಬ್ಬನಿಗೆ ಜ್ಞಾನ ಹೇಗೆ ಬಂದಿತು ಎಂಬ ವಿಚಾರವಾಗಿ ಒಂದು ಹಳೆಯ ಕಥೆಯನ್ನು ಛಾಂದೋಗ್ಯ ಉಪನಿಷತ್ತಿನಿಂದ ಹೇಳುತ್ತೇನೆ. ಕಥೆ ಯೇನೋ ಅಷ್ಟು ನಯವಲ್ಲ. ಆದರೆ ಅದರಲ್ಲಿ ಒಂದು ತತ್ತ್ವ ಅಡಗಿದೆ ಎಂಬು ದನ್ನು ನಾವು ನೋಡುತ್ತೇವೆ. ಸಣ್ಣ ಹುಡುಗನೊಬ್ಬನು ತನ್ನ ತಾಯಿಗೆ, ತಾನು ವೇದವನ್ನು ಕಲಿಯಲು ಹೋಗುತ್ತೇನೆ, ನನ್ನ ತಂದೆಯ ಹೆಸರು ಮತ್ತು ಜಾತಿಯನ್ನು ಹೇಳು ಎಂದನು. ತಾಯಿ ಶಾಸ್ತ್ರ ಪ್ರಕಾರ ಮದುವೆಯಾದವ ಳಲ್ಲ. ಇಂಡಿಯಾ ದೇಶದಲ್ಲಿ ಅವಿವಾಹಿತ ಸ್ತ್ರೀಯ ಮಗುವನ್ನು ಜಾತಿ ಭ್ರಷ್ಟ ನೆನ್ನುತ್ತಾರೆ. ಸಮಾಜ ಅವನನ್ನು ಸ್ವಿಕರಿಸುವುದಿಲ್ಲ. ವೇದಾಧ್ಯಯನಕ್ಕೆ ಅವನು ಅರ್ಹನಲ್ಲ. ಆದಕಾರಣ ಪಾಪ ತಾಯಿ, "ಮಗು, ನನಗೆ ನಿನ್ನ ವಂಶದ ಹೆಸರು ಗೊತ್ತಿಲ್ಲ. ನಾನು ಕೆಲಸದಲ್ಲಿದ್ದೆ. ಅನೇಕ ಕಡೆ ಕೆಲಸ ಮಾಡಿದೆ. ನನಗೆ ನಿಮ್ಮ ತಂದೆಯಾರೋ ಗೊತ್ತಿಲ್ಲ. ಆದರೆ ನನ್ನ ಹೆಸರು ಜಬಾಲಾ. ನಿನ್ನ ಹೆಸರು ಸತ್ಯಕಾಮ" ಎಂದಳು. ಆ ಹುಡುಗ ಋಷಿಯ ಹತ್ತಿರ ಹೋಗಿ ವಿದ್ಯಾರ್ಥಿ ಯಂತೆ ಸ್ವೀಕರಿಸಬೇಕೆಂದು ಕೇಳಿಕೊಂಡನು. ಋಷಿ, "ನಿನ್ನ ತಂದೆಯ ಹೆಸ ರೇನು? ನಿನ್ನ ಜಾತಿಯಾವುದು?" ಎಂದು ಪ್ರಶ್ನೆ ಮಾಡಿದನು. ತಾಯಿಯಿಂದ ಏನನ್ನು ಕೇಳಿದನೋ ಅದನ್ನು ಹುಡುಗನು ಪುನಃ ಹೇಳಿದನು. ಋಷಿಯು ತಕ್ಷಣವೆ ಬ್ರಾಹ್ಮಣನಲ್ಲದೆ ಮತ್ತಾರೂ ತನ್ನ ಶೀಲಕ್ಕೆ ಕಳಂಕ ತರುವ ಸತ್ಯವನ್ನು ಹೇಳನು, "ನೀನು ಬ್ರಾಹ್ಮಣ, ನಾನು ನಿನಗೆ ಉಪದೇಶ ಕೊಡುತ್ತೇನೆ. ನೀನು ಸತ್ಯವನ್ನು ತ್ಯಜಿಸಿಲ್ಲ" ಎಂದನು. ಹೀಗೆ ಆ ಹುಡುಗನನ್ನು ತನ್ನ ಹತ್ತಿರ ಇಟ್ಟುಕೊಂಡು ಅವನಿಗೆ ವಿದ್ಯೆಯನ್ನು, ಕಲಿಸಿದನು.

ಹಿಂದೆ ಭರತಖಂಡದಲ್ಲಿದ್ದ ಕೆಲವು ವಿಚಿತ್ರ ವಿದ್ಯಾಭ್ಯಾಸ ಕ್ರಮಕ್ಕೆ ಈಗ ಬರುತ್ತೇವೆ. ಗುರು ಸತ್ಯಕಾಮನಿಗೆ ನಾನೂರು ನಿರ್ಬಲವಾದ ಬಡಕಲ ಆಕಳನ್ನು ಕೊಟ್ಟು ಅವನ್ನು ನೋಡಿಕೊಳ್ಳುವಂತೆ ಕಾಡಿಗೆ ಕಳುಹಿಸಿದನು. ಹುಡುಗನು ಅಲ್ಲಿಗೆ ಹೋಗಿ ಕೆಲವು ದಿನಗಳು ಇದ್ದನು. ಗುರು ಶಿಷ್ಯನಿಗೆ ಮಂದೆಯಲ್ಲಿ ದನ ಒಂದುಸಾವಿರಕ್ಕೆ ಬಂದಾಗ ಹಿಂತಿರುಗುವಂತೆ ಹೇಳಿದ್ದನು. ಕೆಲವು ವರುಷಗಳ ತರುವಾಯ ಒಂದು ದಿನ ದೊಡ್ಡ ಎತ್ತೊಂದು ಸತ್ಯಕಾಮನಿಗೆ, "ನಾವೀಗ ಒಂದುಸಾವಿರವಾಗಿರುವೆವು. ನಿನ್ನ ಗುರು ಬಳಿಗೆ ನಮ್ಮನ್ನು ಕರೆದು ಕೊಂಡುಹೋಗು; ನಾನು ನಿನಗೆ ಸ್ವಲ್ಪ ಬ್ರಹ್ಮದ ವಿಚಾರವನ್ನು ಹೇಳು

ತ್ರೇನೆ." ಎಂದಿತು. ಸತ್ಯಕಾಮನು, "ಹೇಳಿ ಸ್ವಾಮಿ" ಎಂದನು. ಎತ್ತು, "ಪೂರ್ವ, ದೇವರ ಒಂದು ಅಂಶ. ಅದರಂತೆ ದಕ್ಷಿಣ ಪಶ್ಚಿಮ ಉತ್ತರ ದಿಕ್ಕುಗಳು. ಪ್ರಧಾನವಾದ ಈ ಮುಖ್ಯ ದಿಕ್ಕುಗಳೂ ಕೂಡ ಬ್ರಹ್ಮನ ನಾಲ್ಕು ಭಾಗಗಳು. ಅಗ್ನಿ ಬ್ರಹ್ಮನ ವಿಚಾರವಾಗಿ ನಿನಗೆ ಸ್ವಲ್ಪ ಹೇಳುತ್ತದೆ" ಎಂದಿತು. ಆಗಿನಕಾಲದಲ್ಲಿ ಅಗ್ನಿ ಒಂದು ಪವಿತ್ರವಾದ ಚಿನ್ಹೆಯಾಗಿತ್ತು. ಪ್ರತಿಯೊಬ್ಬ ಶಿಷ್ಯನೂ ಬೆಂಕಿಯನ್ನೂ ತಂದು ಅದಕ್ಕೆ ಆಹುತಿಯನ್ನು ಕೊಡಬೇಕಾಗಿತ್ತು. ಮಾರನೆ ದಿನ ಸತ್ಯಕಾಮನು ತನ್ನ ಗುರುವಿನ ಮನೆಗೆ ಹೊರಟನು. ಸಾಯಂ ಕಾಲ ತನ್ನ ಆಹ್ನೀಕವನ್ನು ತೀರಿಸಿದಮೇಲೆ ಅಗ್ನಿಯನ್ನು ಪೂಜಿಸಿ ಅದರ ಹತ್ತಿರ ಕುಳಿತುಕೊಂಡಿರುವಾಗ ಬೆಂಕಿಯಿಂದ ಬರುವ ಸತ್ಯಕಾಮನೆಂಬ ಒಂದು ಧ್ವನಿ ಯನ್ನು ಕೇಳಿದನು. ಸತ್ಯಕಾಮನು, "ಮಾತನಾಡಿ ಸ್ವಾಮಿ" ಎಂದನು (ಸ್ಯಾಮುಯಲ್ಲನು ರಹಸ್ಯವಾದ ಧ್ವನಿಯನ್ನು ಹೇಗೆ ಕೇಳಿದನು ಎಂಬ ಸಂಗತಿಯನ್ನು ಬೈಬಲ್ಲಿನಲ್ಲಿ ಓದಿರಬಹುದು.) "ಓ, ಸತ್ಯಕಾಮ, ನಾನು ನಿನಗೆ ಸ್ವಲ್ಪ ಬ್ರಹ್ಮನ ವಿಷಯವನ್ನು ತಿಳಿಸುವುದಕ್ಕೆ ಬಂದಿರುವೆನು. ಪೃಥ್ವಿಯು ಆ ಬ್ರಹ್ಮನ ಒಂದು ಭಾಗ; ಅಂತರಿಕ್ಷ ಮತ್ತು ಸ್ವರ್ಗಗಳು ಅದರ ಒಂದು ಅಂಶ. ಸಾಗರವೂ ಕೂಡ ಅದರ ಒಂದು ಅಂಶ." ನಂತರ ಬೆಂಕಿ ಯಾವುದೋ ಒಂದು ಹಕ್ಕಿಯು ಅವನಿಗೆ ಬ್ರಹ್ಮನ ವಿಚಾರವನ್ನು ಸ್ವಲ್ಪ ತಿಳಿಸು ವುದೆಂದಿತು. ಸತ್ಯಕಾಮನು ತನ್ನ ಪಯಣವನ್ನು ಮುಂದುವರಿಸಿದನು. ಮಾರನೆ ದಿನ ಅವನು ತನ್ನ ಸಂಜೆಯ ಹೋಮ ಮುಂತಾದುವುಗಳನ್ನು ತೀರಿಸಿಯಾದ ಮೇಲೆ ಒಂದು ಹಂಸ ಬಂದಿತು. "ನಾನು ನಿನಗೆ ಬ್ರಹ್ಮದ ವಿಚಾರವನ್ನು ಸ್ವಲ್ಪ ತಿಳಿಸುತ್ತೇನೆ. ನೀನು ಪೂಜಿಸುವ ಈ ಬೆಂಕಿ ಬ್ರಹ್ಮನ ಒಂದು ಅಂಶ ಸೂರ್ಯನು ಅವನ ಒಂದು ಅಂಶ, ಚಂದ್ರನು ಅವನ ಒಂದು ಅಂಶ. ಮಿಂಚು ಅವನ ಒಂದು ಅಂಶ. ಉದ್ಗಾ ಎಂಬ ಹಕ್ಕಿ ಅದರ ವಿಚಾರವಾಗಿ ಹೆಚ್ಚು ಹೇಳುವುದು" ಎಂದಿತು. ಮಾರನೆ ದಿನ ಸಾಯಂಕಾಲ ಆ ಪಕ್ಷಿ ಬಂದಿತು. ಹಿಂದಿನಂತೆಯೇ ಧ್ವನಿ ಸತ್ಯಕಾಮನಿಗೆ ಕೇಳಿಸಿತು. "ಬ್ರಹ್ಮನ ವಿಚಾರವಾಗಿ ನಾನು ನಿನಗೆ ಸ್ವಲ್ಪ ಹೇಳುತ್ತೇನೆ. ಪ್ರಾಣ ಬ್ರಹ್ಮನ ಒಂದು ಭಾಗ ನೋಟ ಒಂದುಭಾಗ. ಕೇಳುವುದೊಂದುಭಾಗ, ಮನಸ್ಸು ಒಂದುಭಾಗ" ಎಂದಿತು. ಶಿಷ್ಯನ ಮುಖವನ್ನು ನೋಡಿದ ತಕ್ಷಣವೇ ಗುರು, "ಸತ್ಯಕಾಮ ಬ್ರಹ್ಮಜ್ಞಾನಿಯಂತೆ ನಿನ್ನ ಮುಖ ಕಂಗೊಳಿಸುತ್ತಿದೆ. ಹಾಗಾದರೆ ಯಾರು ನಿನಗೆ ಕಲಿಸಿದರು?" ಎಂದು ಕೇಳಿದನು. "ಮನುಷ್ಯರಲ್ಲದ ಬೇರೆ ವ್ಯಕ್ತಿ

ಗಳು" ಎಂದನು ಸತ್ಯಕಾಮ. "ಆದರೆ ಪೂಜ್ಯರೆ, ನೀವು ನನಗೆ ಬೋಧಿಸಬೇಕು. ಏಕೆಂದರೆ ಗುರುವಿನಿಂದ ಕಲಿತ ವಿದ್ಯೆಯೊಂದೆ ಶ್ರೇಯೋಭಿವೃದ್ಧಿಗೆ ದಾರಿ ಎಂದು ನಿಮ್ಮಂತಹ ಮಹಾತ್ಮರಿಂದ ಕೇಳಿರುವೆನು" ಎಂದನು. ಗುರುಗಳು ಭಗವಂತನಿಂದ ತಮಗೆ ಪ್ರಾಪ್ತವಾದ ಅದೇ ಬ್ರಹ್ಮಜ್ಞಾನವನ್ನು ಶಿಷ್ಯನಿಗೆ ಬೋಧಿಸಿದರು. "ಯೇನನ್ನು ಬಿಡಲಿಲ್ಲ. ಯೇನನ್ನು ಬಿಡಲಿಲ್ಲ."

ಈಗ ಎತ್ತು, ಬೆಂಕಿ ಮತ್ತು ಹಕ್ಕಿಗಳು ಬೋಧಿಸಿದ ದೃಷ್ಟಾಂತದ ಕಥೆಗಳಲ್ಲದೆ, ಆಗಿನ ಕಾಲದಲ್ಲಿ ಆಲೋಚನೆಯರೀತಿ ಮತ್ತು ಅದು ಯಾವ ದಿಕ್ಕಿನಲ್ಲಿ ಹೋಗುತ್ತಿತ್ತು ಎಂಬುದನ್ನು ನಾವು ನೊಡುವೆವು. ಮಹದಾಲೋಚನೆಯ ಬೀಜರೂಪವನ್ನು ನಾವಿಲ್ಲಿ ನೋಡುವೆವು. ಈ ಧ್ವನಿಗಳೆಲ್ಲವೂ ನಮ್ಮೊಳಗೆ ಇರುವುವು. ಈ ಸತ್ಯಗಳು ನಮಗೆ ಚೆನ್ನಾಗಿ ಅರ್ಥವಾಗುವುದರಿಂದ ಈ ಧ್ವನಿ ನಮ್ಮ ಹೃದಯದಲ್ಲಿಯೇ ಇರುವುದು ಎಂದು ಗೊತ್ತಾಗುವುದು. ಸತ್ಯವನ್ನು ಕೇಳುತ್ತಿದ್ದ ಶಿಷ್ಯನಿಗೆ ಇದು ಗೊತ್ತಾಯಿತು. ಆದರೆ ಅವನು ಕೊಟ್ಟ ವಿವರಣೆ ಸರಿಯಾಗಿರಲಿಲ್ಲ. ಧ್ವನಿ ಯಾವಾಗಲೂ ತನ್ನಲ್ಲಿಯೇ ಇದ್ದರೂ ಅದು ಹೊರಗಿನಿಂದ ಬರುತ್ತಿತ್ತೆಂದು ವ್ಯಾಖ್ಯಾನ ಮಾಡುತ್ತಿದ್ದನು. ನಮಗೆ ಸಿಕ್ಕುವ ಎರಡನೆಯ ಅಭಿಪ್ರಾಯವೆ, ಆತ್ಮಜ್ಞಾನವನ್ನು ಕಾರ್ಯೋನ್ಮುಖವನ್ನಾಗಿ ಮಾಡುವುದು. ಧರ್ಮದ ಅನುಷ್ಠಾನ ಸಾಧ್ಯತೆಗಳನ್ನು ಈ ಪ್ರಪಂಚ ಯಾವಾಗಲೂ ಹುಡುಕುತ್ತಿದೆ. ಈ ಕಥೆಗಳಲ್ಲಿ ಇವು ದಿನಕ್ರಮೇಣ ಹೇಗೆ ಹೆಚ್ಚು ಹೆಚ್ಚಾಗಿ ಅಭ್ಯಾಸ ಸಾಧ್ಯವಾಗುತ್ತಿತ್ತು ಎಂಬುದನ್ನು ನೋಡುವೆವು. ಶಿಷ್ಯನಿಗೆ ಪರಿಚಯವಾದ ವಸ್ತುಗಳ ಮೂಲಕದಲ್ಲೆಲ್ಲಾ ಸತ್ಯವು ತೋರಿಸಲ್ಪಟ್ಟಿತು. ಅವರು ಪೂಜಿಸುತ್ತಿದ್ದ ಅಗ್ನಿಯು ಬ್ರಹ್ಮ, ಪೃಥ್ವಿ ಬ್ರಹ್ಮನ ಒಂದು ಭಾಗ ಇತ್ಯಾದಿ.

ನಂತರದ ಕಥೆಯೇ ಸತ್ಯಕಾಮನ ಶಿಷ್ಯನಾದ ಉಪಕೋಸಲ ಕಮಲಾಯನನದು. ಅವನಿಂದ ಉಪದೇಶವನ್ನು ಪಡೆಯಲು ಹೋಗಿ, ಅಲ್ಲಿಯೇ ಗುರುವಿನೊಂದಿಗೆ ಕೆಲವು ಕಾಲವಿದ್ದನು. ಸತ್ಯಕಾಮನು ಒಂದು ಪಯಣದ ಮೇಲೆ ಹೊರಟುಹೋದನು. ಶಿಷ್ಯನು ಬಹಳ ಖಿನ್ನನಾದನು. ಗುರುಪತ್ನಿ ಬಂದು ಶಿಷ್ಯನನ್ನು ಏತಕ್ಕೆ ಊಟಮಾಡುತ್ತಿಲ್ಲವೆಂದು ಪ್ರಶ್ನಿಸಿದಾಗ, "ನನಗೆ ತುಂಬ ದುಃಖವಾಗಿದೆ. ಊಟಮಾಡಲಾರೆ" ಎಂದು ಉತ್ತರ ಕೊಟ್ಟನು. ಅವನು ಪೂಜಿಸುತ್ತಿದ್ದ ಬೆಂಕಿಯಿಂದ ಧ್ವನಿಯೊಂದು, "ಈ ಜೀವನ ಬ್ರಹ್ಮ, ಬ್ರಹ್ಮನೇ ಆಕಾಶ, ಬ್ರಹ್ಮನೇ ಆನಂದ. ಬ್ರಹ್ಮನನ್ನು ತಿಳಿ" ಎಂದಿತು. ಹುಡುಗನು, "ಸ್ವಾಮಿ, ಜೀವನ ಬ್ರಹ್ಮವೆಂದೇನೋ ಗೊತ್ತಾಗುತ್ತದೆ, ಆದರೆ ಅದು ಆಕಾಶ

ಆನಂದವೆನ್ನುವುದು ಗೊತ್ತಾಗುವುದಿಲ್ಲ" ಎಂದನು. ಆಗ ಬೆಂಕಿ, ಆಕಾ
ಆನಂದಗಳೆಂಬ ಎರಡು ಪದಗಳೂ ನಿಜವಾಗಿ ಒಂದೇ ಪದವನ್ನು ಅಂದರೆ ಹೃದ
ದಲ್ಲಿರುವ ಸಚೇತನವಾದ ಆಕಾಶ (ಶುದ್ಧ ಚೈತನ್ಯ) ವನ್ನು ಸೂಚಿಸುತ್ತ
ಎಂದಿತು. ಬ್ರಹ್ಮನೇ ಜೀವವೆಂದೂ ಹೃದಯಾಕಾಶವೆಂದೂ ಬೋಧಿಸಿ
ನಂತರ ಬೆಂಕಿ, "ನೀನು ಪೂಜಿಸುವ, ಪೃಥ್ವಿ, ಅನ್ನ, ಬೆಂಕಿ, ಸೂರ್ಯ ಇವುಗ
ಬ್ರಹ್ಮನ ಆಕಾರಗಳು. ಸೂರ್ಯನಲ್ಲಿ ಕಾಣುವ ಪುರುಷನೂ ನಾನೆ. ಯಾ
ಇದು ಗೊತ್ತಿದೆಯೋ ಯಾರು ಅವನಮೇಲೆ ಧ್ಯಾನಮಾಡುತ್ತಾರೆಯೋ, ಅ
ಪಾಪವೆಲ್ಲ ಕ್ಷೀಣಿಸುವುದು. ಧೀರ್ಘಾಯುಶ್ಯನಾಗಿ ಸುಖವಾಗಿ ಬಾಳುವ
ಯಾರು ದಶದಿಕ್ಕಿನಲ್ಲಿರುವನೋ ಯಾರು ಚಂದ್ರನಲ್ಲಿ, ನಕ್ಷತ್ರದಲ್ಲಿ, ಜಲ
ಇರುವನೋ, ಅವನೇ ನಾನು. ಯಾರು ಜೀವನದಲ್ಲಿ, ಆಕಾಶದಲ್ಲಿ ಸ್ವರ್ಗ
ಮತ್ತು ಜ್ಯೋತಿಯಲ್ಲಿ ವಾಸಿಸುವನೊ ಅವನೇ ನಾನು" ಎಂದು ಬೋಧಿಸಿ
ಇಲ್ಲಿಯೂ ಕೂಡ ಅದೇ ಅನುಷ್ಠಾನದ ಧರ್ಮದ ಭಾವವನ್ನೇ ನೋಡುತ್ತೇ
ಅವರು ಪೂಜಿಸುತ್ತಿದ್ದ ಬೆಂಕಿ ಸೂರ್ಯ ಚಂದ್ರ ಅವರಿಗೆ ಪರಿಚಿತವಾದ ಧ್ವನಿ ಇ
ಕಥಾವಸ್ತುವಾಗಿ, ಅದಕ್ಕೆ ಒಂದು ಉತ್ತಮ ಅರ್ಥವನ್ನು ಕೊಟ್ಟು ವಿವರಿಸುತ್ತಾ
ಇದೇ ನಿಜವಾಗಿಯೂ ವೇದಾಂತದ ಅನುಷ್ಠಾನ ಭಾಗ. ಇದು ಪ್ರಪಂಚವನ್ನು ನಾ
ಮಾಡುವುದಿಲ್ಲ. ಆದರೆ ಅದನ್ನು ವಿವರಿಸುತ್ತದೆ. ವ್ಯಕ್ತಿತ್ವವನ್ನು ನಾಶಮಾಡು
ದಿಲ್ಲ. ಆದರೆ ಅದನ್ನು ವಿವರಿಸುತ್ತದೆ. ಮಾನವನ ವೈಶಿಷ್ಟ್ಯತೆಯನ್ನು ನಾ
ಮಾಡುವುದಿಲ್ಲ. ಆದರೆ ಅವನ ನಿಜವಾದ ವೈಶಿಷ್ಟ್ಯತೆಯನ್ನು ತೋರಿ ಅದ
ವಿವರಿಸುತ್ತದೆ. ತಮ್ಮ ಕಣ್ಣೆದುರಿಗೆ ಕಾಣುವ ಜಗತ್ತು ಕೆಲಸಕ್ಕೆ ಬಾರದುದೆಂದು
ಮತ್ತು ಅದಕ್ಕೆ ಅಸ್ತಿತ್ವವಿಲ್ಲವೆಂದೂ ಹೇಳದೆ ನಿಮಗೆ ಅಪಾಯವಾಗದೇ
ಬೇಕಾದರೆ ಈ ಪ್ರಪಂಚವೇನೆಂಬುದನ್ನು ತಿಳಿದುಕೊಳ್ಳಿ ಎನ್ನುತ್ತದೆ. ಸತ್ಯಕಾ
ನಿಗೆ ಆ ಧ್ವನಿ ಅವನು ಪೂಜಿಸುತ್ತಿದ್ದ, ಬೆಂಕಿ, ಸೂರ್ಯ, ಚಂದ್ರ, ವಿದ್ಯು
ಮತ್ತು ಇನ್ನೂ ಇತರ ವಸ್ತುಗಳಲ್ಲಿರುವುದೆಲ್ಲ ತಪ್ಪೆಂದು ಹೇಳಲಿಲ್ಲ. ಆದರೆ ಯಾ
ಶಕ್ತಿಯು ಸೂರ್ಯ ಚಂದ್ರ ಬೆಂಕಿ ವಿದ್ಯುತ್ ಪೃಥ್ವಿ ಇವುಗಳಲ್ಲಿದೆಯೋ ಆ
ಶಕ್ತಿಯೇ ತನ್ನಲ್ಲಿದೆ ಎಂದಿತು. ಇದರಿಂದ ಸತ್ಯಕಾಮನಿಗೆ ಇವುಗಳೆಲ್ಲ
ರೂಪಾಂತರವನ್ನು ಹೊಂದಿದಂತೆ ತೋರಿದವು. ಮೊದಲು ಯಾವ ಬೆಂಕಿ ಆಹು
ಯನ್ನು ಕೊಡುವ ಕೇವಲ ವಾಸ್ತವಿಕ ಬೆಂಕಿಯಾಗಿದ್ದಿತೋ, ಅದು ರೂಪಾಂ
ಹೊಂದಿ ದೇವರಾಯಿತು. ಭೂಮಿಯು ರೂಪಾಂತರ ಹೊಂದಿತು. ಜೀ
ರೂಪಾಂತರ ಹೊಂದಿತು. ಸೂರ್ಯ ಚಂದ್ರ ತಾರಾವಳಿಗಳು ಮಿಂಚು ಮತ್ತು

ಲವೂ ರೂಪಾಂತರ ಹೊಂದಿ ದೈವತ್ವವನ್ನು ತಾಳಿದವು. ಅವುಗಳ ನಿಜಸ್ವರೂಪವು ತಿಳಿಯಿತು. ಸಕಲದರಲ್ಲಿಯೂ ದೇವರನ್ನು ನೋಡುವುದು, ವಸ್ತುಗಳು ನಮಗೆ ಕಾಣುವಂತೆ ನೋಡದೆ, ಅವುಗಳ ಅಂತರಾಳದಲ್ಲಿರುವ ಸತ್ಯಾಂಶವನ್ನು ಮನಗಾಣುವುದೇ ವೇದಾಂತದ ಗುರಿ. ನಂತರ, ಉಪನಿಷತ್ತಿನಲ್ಲಿ ಮತ್ತೊಂದು ಬೋಧನೆಯನ್ನು ಉಪಯೋಗಿಸುತ್ತಾರೆ. "ಯಾರು ನಮ್ಮ ಕಣ್ಣು ಮೂಲಕ ಪ್ರಕಾಶಿಸುವನೋ ಅವನೇ ಬ್ರಹ್ಮ. ಅವನೇ ಸೌಂದರ್ಯಮಯನು. ಅವನೇ ಕಾಂತಿಮಯನು. ಈ ಪ್ರಪಂಚದಲ್ಲೆಲ್ಲ ಪ್ರಕಾಶಿಸುತ್ತಿರುವವನೂ ಅವನೆ. ಪರಿಶುದ್ಧಾತ್ಮರಿಗೆ ಬರುವ ಒಂದು ಬಗೆಯ ವಿಚಿತ್ರವಾದ ಕಾಂತಿಯೆ ಕಣ್ಣಿನಲ್ಲಿರುವ ಬೆಳಕೆಂಬುದು. ವ್ಯಕ್ತಿಯು ಪರಿಶುದ್ಧವಾದಮೇಲೆ ಅವನ ಕಣ್ಣಿನಲ್ಲಿ ಅಂತಹ ಕಾಂತಿ ಕಂಗೊಳಿಸುತ್ತದೆಂದು ಭಾಷ್ಯಕಾರರೊಬ್ಬರು ಹೇಳುತ್ತಾರೆ. ಆ ಕಾಂತಿಯು ಸರ್ವಾಂತರ್ಯಾಮಿಯಾದ ಅಂತರಾತ್ಮನದು. ಆ ಕಾಂತಿಯು ಗ್ರಹಗಳಲ್ಲಿ, ತಾರಾವಳಿಗಳಲ್ಲಿ ಸೂರ್ಯನಲ್ಲಿ ಪ್ರಕಾಶಿಸುತ್ತಿರುವುದು.

ಈ ಪುರಾತನ ಉಪನಿಷತ್ತುಗಳು ಜನನ ಮರಣ ಮುಂತಾದ ವಿಷಯಕ್ಕೆ ಸಂಬಂಧಪಟ್ಟ ಮತ್ತೊಂದು ಸಿದ್ಧಾಂತವನ್ನು ನಿಮಗೆ ಓದುತ್ತೇನೆ. ಬಹುಶಃ ನಿಮಗೆ ಅದರಲ್ಲಿ ಆಸಕ್ತಿ ಇರಬಹುದು. ಶ್ವೇತಕೇತು ಪಾಂಚಾಲ ದೇಶದ ರಾಜನ ಬಳಿಗೆ ಹೋದನು. "ರಾಜನು, ಮಾನವ ಕಾಲವಾದ ಮೇಲೆ ಎಲ್ಲಿಗೆ ಹೋಗುತ್ತಾರೆ ಎಂಬುದು ನಿನಗೆ ಗೊತ್ತೆ? ಬೇರೆ ಲೋಕವು ಏತಕ್ಕೆ ಪೂರ್ತಿಯಾಗುವುದಿಲ್ಲ ಎಂಬುದು ನಿನಗೆ ಗೊತ್ತಿದೆಯೆ?" ಎಂದು ಪ್ರಶ್ನೆ ಮಾಡಿದನು. ಹುಡುಗ ತನಗೆ ಗೊತ್ತಿಲ್ಲವೆಂದು ಹೇಳಿದನು. ನಂತರ ತಂದೆ ಮಕ್ಕಳಿಬ್ಬರೂ ರಾಜನ ಬಳಿಗೆ ಬಂದರು. ಈ ಜ್ಞಾನ ಬ್ರಾಹ್ಮಣರಿಗೆ ಎಂದಿಗೂ ಗೊತ್ತಿರಲಿಲ್ಲವೆಂದೂ, ಅದು ರಾಜರಿಗೆ ಮಾತ್ರ ತಿಳಿದಿತ್ತೆಂದೂ ಹೇಳಿದನು. ಆದಕಾರಣವೆ ರಾಜರು ದೇಶವನ್ನು ಆಳುತ್ತಿದ್ದರು. ಆತನು ಕೆಲವು ಕಾಲ ರಾಜನ ಸೇವೆ ಮಾಡಿದನು. ಕೊನೆಗೆ ರಾಜನು ಅದನ್ನು ಬೋಧಿಸುತ್ತೇನೆಂದನು. "ಓ ಗೌತಮ, ಆ ಪರಲೋಕವೆ ಅಗ್ನಿ, ಸೂರ್ಯನೆ ಅದಕ್ಕೆ ಸೌದೆ, ಕಿರಣಗಳೇ ಧೂಮ, ಹಗಲೇ ಉರಿ, ಚಂದ್ರನೇ ತನಿಗೆಂಡ, ತಾರಾವಳಿಗಳೆ ಕಿಡಿಗಳು. ಈ ಅಗ್ನಿಯಲ್ಲಿ ದೇವತೆಗಳು ಶ್ರದ್ಧೆಯ ಆಹುತಿಯನ್ನು ಅರ್ಪಿಸುವರು. ಈ ಆಹುತಿಯಿಂದ ಸೋಮ ರಾಜನು ಜನಿಸುವನು" ಈ ರೀತಿಯಲ್ಲಿ ಅವನು ಹೇಳುತ್ತಾ ಹೋಗುವನು. "ಆ ಸಣ್ಣ ಬೆಂಕಿಗೆ ನೀನು ಆಹುತಿಯನ್ನು ಕೊಡಬೇಕಾಗಿಲ್ಲ. ಈ ವಿಶ್ವವೇ ಆ ಬೆಂಕಿ. ಈ ಆಹುತಿಯು, ಈ ಪೂಜೆಯು ಅನವರತವೂ ನಡೆಯುತ್ತಿರುವುದು. ದೇವತೆಗಳು,

ಯಕ್ಷರು, ಮಾನವರು ಎಲ್ಲರೂ ಅದನ್ನು ಪೂಜಿಸುತ್ತಿರುವರು. ಮಾನವ ದೇ
ಅಗ್ನಿಗೆ ಅತ್ಯುತ್ತಮವಾದ ಚಿಹ್ನೆ" ಇಲ್ಲಿಯೂ ಕೂಡ ಆದರ್ಶ ಕಾರ್ಯಕಾರಿ
ತ್ತಿರುವುದನ್ನು ನಾವು ನೋಡುತ್ತೇವೆ. ಚರಾಚರ ವಸ್ತುಗಳಲ್ಲೆಲ್ಲಾ
ಸಂಚರಿಸುತ್ತಿರುವನು. ಈ ಕಥೆಗಳಲ್ಲೆಲ್ಲಾ ಅಂತರ್ಗತವಾಗಿರುವ ನೀ
ವೇನೆಂದರೆ ನಾವು ಕಂಡುಹಿಡಿದ ಚಿಹ್ನೆಗಳು ಒಳ್ಳೆಯದಾಗಿರಬಹುದು,
ನಮಗೆ ಸಹಾಯಮಾಡಬಹುದು, ಆದರೆ ನಾವು ಕಂಡುಹಿಡಿಯಬಹು
ಚಿಹ್ನೆಗಳೆಲ್ಲಕ್ಕಿಂತಲೂ ಉತ್ತಮವಾದುದೊಂದು ಇರುವುದು ಎನ್ನುವುದು. ದೇ
ಪೂಜೆಗೆ ಅನುಕೂಲವಾಗಲೆಂದು ನೀವೊಂದು ವಿಗ್ರಹವನ್ನು ಕಂಡುಹಿ
ಬಹುದು. ಅದಕ್ಕಿಂತ ಉತ್ತಮವಾದ ಚಿಹ್ನೆಯೊಂದು ಜೀವಂತನಾಗಿ
ಮನುಷ್ಯನಲ್ಲಿದೆ. ದೇವರನ್ನು ಪೂಜಿಸುವುದಕ್ಕೋಸುಗ ನೀವೊಂದು
ಯನ್ನು ಕಟ್ಟಬಹುದು. ಅದು ಸುಂದರವಾಗಿರಬಹುದು. ಆದರೆ ಅದಕ್ಕ
ಮೇಲಾದ, ಅದಕ್ಕಿಂತ ಮತ್ತೂ ಉತ್ತಮವಾದ ಮಾನವ ದೇಹವಾ
ಇರುವುದು.

ವೇದಗಳಲ್ಲಿ ಜ್ಞಾನಖಾಂಡ ಕರ್ಮಖಾಂಡಗಳೆಂಬ ಎರಡು ಭಾಗ
ವುದು ನಿಮಗೆ ಗೊತ್ತಿದೆ. ಕೆಲವು ಕಾಲಾನಂತರ ಕರ್ಮಖಾಂಡ ಬಹಳ
ಯಾಗಿ ತೊಡಕಾಯಿತು. ಅವುಗಳನ್ನು ಬಿಡಿಸುವುದೇ ಬಹಳ ಕಷ್ಟವಾಯಿ
ಆದಕಾರಣ ಉಪನಿಷತ್ತಿನಲ್ಲಿ ಕರ್ಮಖಾಂಡದ ಭಾಗವನ್ನೇ ಹೆಚ್ಚುಪಾಲು
ಮಾಡಿರುವುದು ನಮಗೆ ತೋರುತ್ತದೆ. ಆದರೆ ನಿಧಾನವಾಗಿ ಯಾವ ವಿಧ
ಬಲಾತ್ಕಾರವನ್ನೂ ಉಪಯೋಗಿಸದೆ ಅವುಗಳನ್ನು ವಿವರಿಸಿ ಬದಲಾವಣೆಗಳ
ತಂದಿರುವರು. ಪೂರ್ವಕಾಲದಲ್ಲಿ ಈ ಆಹುತಿ ಮತ್ತು ಬಲಿಗಳು ಇರುವುದ
ನಾವು ನೋಡುತ್ತೇವೆ. ನಂತರ ತತ್ತ್ವಜ್ಞರು ಬಂದರು. ಆಧುನಿಕ ಸಮಾಜ ಸು
ರಕರಂತೆ ನಿಶೇಧ ಮಾರ್ಗವನ್ನು ಅವಲಂಬಿಸದೆ, ಮೂಢಮತಿಗಳ ಕೈಯ್ಯಿ
ಅವರು ಪೂಜಿಸುತ್ತಿದ್ದ ಚಿಹ್ನೆಯನ್ನು ಸುಮ್ಮನೆ ಕಿತ್ತುಕೊಳ್ಳುವುದಕ್ಕಿಂತ
ಸ್ಥಾನವನ್ನು ಆಕ್ರಮಿಸಲು ಉತ್ತಮವಾದ ಆದರ್ಶವನ್ನು ಕೊಡುತ್ತಿದ್ದ
ಇಲ್ಲಿ ಬೆಂಕಿಯ ಚಿಹ್ನೆಯೊಂದು ಇದೆ. ಬಹಳ ಒಳ್ಳೆಯದು. ಆದರೆ
ಪೃಥ್ವಿಯ ಮತ್ತೊಂದು ಚಿಹ್ನೆ ಇದೆ. ಎಷ್ಟು ಮಹೋತ್ತುಂಗವಾದ ಸುಂದರವಾ
ಚಿಹ್ನೆ ಇದು! ಸಣ್ಣ ಗುಡಿಯೊಂದು ಇಲ್ಲಿದೆ. ಆದರೆ ಇಡೀ ವಿಶ್ವವೇ ಒಂ
ದೇವಸ್ಥಾನ. ಮನುಷ್ಯನು ತನಗೆ ಇಚ್ಛೆಬಂದೆಡೆಯಲ್ಲಿ ಆರಾಧಿಸಬಹುದ
ಪ್ರಪಂಚದಲ್ಲಿ ಮಾನವನು ಸೃಷ್ಟಿಸಿರುವ ಅನೇಕ ವಿಚಿತ್ರ ಚಿತ್ರಗಳಿವೆ ಮತ್ತು ವಿಗ್ರ

ಗಳಿವೆ. ಉಸಿರಾಡುವ ಸಚೇತನವಾದ ಮಾನವ ದೇಹವೇ ಸರ್ವೋತ್ಕೃಷ್ಟವಾದ ವಿಗ್ರಹ. ಈ ಪೀಠಕ್ಕೆ ಪೂಜೆಮಾಡುವುದೇ ನಿರ್ಜೀವವಾದ ಚಿಹ್ನೆಗಳನ್ನು ಪೂಜಿಸುವುದಕ್ಕಿಂತ ಉತ್ತಮ.

ಈಗ ನಾವೊಂದು ಅಸಾಧಾರಣ ಸಿದ್ಧಾಂತಕ್ಕೆ ಬರುತ್ತೇವೆ. ಅದರಲ್ಲಿ ಬಹು ಭಾಗ ನನಗೇ ಅರ್ಥವಾಗುವುದಿಲ್ಲ. ನಿಮಗೆ ಏನಾದರೂ ಸ್ವಲ್ಪ ಅರ್ಥವಾಗುವಂತೆ ಇದ್ದರೆ ಇದನ್ನು ಓದುತ್ತೇನೆ. ಧ್ಯಾನದಿಂದ ಯಾರು ಪವಿತ್ರರಾಗಿ ಜ್ಞಾನವನ್ನು ಗಳಿಸುವರೋ, ಅವರು ಮೊದಲು ಬೆಳಕಿಗೆ ಹೋಗುತ್ತಾರೆ. ನಂತರ ಬೆಳಕಿನಿಂದ ಹಗಲಿಗೆ, ಹಗಲಿನಿಂದ ಶುಕ್ಲಪಕ್ಷಕ್ಕೆ, ಅಲ್ಲಿಂದ ಉತ್ತರಾಯಣಕ್ಕೆ, ಅಲ್ಲಿಂದ ವರುಷಕ್ಕೆ, ವರುಷದಿಂದ ಸೂರ್ಯನಿಗೆ, ಸೂರ್ಯನಿಂದ ಚಂದ್ರನಿಗೆ, ಚಂದ್ರನಿಂದ ಮಿಂಚಿಗೆ ಹೋಗುತ್ತಾನೆ. ಮಿಂಚಿನ ಲೋಕಕ್ಕೆ ಹೋದಾಗ ಒಬ್ಬ ಅಮಾನುಷ ವ್ಯಕ್ತಿಯನ್ನು ಸಂದರ್ಶಿಸುವನು. ಆತನು ಇವನನ್ನು ಸಾಕ್ಷಾತ್ ಬ್ರಹ್ಮನಲ್ಲಿಗೆ ಕೊಂಡೊಯ್ಯುವನು. ಇದು ದೇವಯಾನದ ಮಾರ್ಗ. ಋಷಿಗಳು ಮತ್ತು ಧರ್ಮಾತ್ಮರು ಕಾಲವಾದರೆ ಅವರು ಈ ಮಾರ್ಗದಲ್ಲಿ ಹೋಗುವರು. ಪುನಃ ಹಿಂತಿರುಗುವುದಿಲ್ಲ. ಈ ಮಾಸ ವರುಷ ಮುಂತಾದುವುಗಳೆಲ್ಲ ಏನೆಂದು ಯಾರಿಗೂ ಚೆನ್ನಾಗಿ ಅರ್ಥವಾಗುವಂತಿಲ್ಲ. ಪ್ರತಿಯೊಬ್ಬರೂ ತಮ್ಮ ತಮ್ಮ ಅರ್ಥವನ್ನು ಅದಕ್ಕೆ ಕೊಡುವರು. ಮತ್ತೆ ಕೆಲವರು ಅದಕ್ಕೇನೂ ಅರ್ಥವೇ ಇಲ್ಲ ಎನ್ನುವರು. ಚಂದ್ರ ಲೋಕಕ್ಕೆ ಮತ್ತು ಸೂರ್ಯ ಲೋಕಕ್ಕೆ ಹೋಗುವುದೆಂದರೇನು? ಮಿಂಚಿನ ಲೋಕಕ್ಕೆ ಹೋದಮೇಲೆ ಜೀವಾತ್ಮನಿಗೆ ಸಹಾಯ ಮಾಡಲು ಬರುವ ವ್ಯಕ್ತಿ ಎಂದರೆ ಏನೆಂದು ಯಾರಿಗೂ ಗೊತ್ತಿಲ್ಲ. ಚಂದ್ರಲೋಕ ಜೀವವಿರುವ ಸ್ಥಳ ಎಂಬ ಒಂದು ಅಭಿಪ್ರಾಯ ಹಿಂದೂಗಳಲ್ಲಿದೆ. ಅಲ್ಲಿಂದ ಜೀವ ಹೇಗೆ ಬಂತೆಂದು ನಾವು ನೋಡುತ್ತೇವೆ. ಯಾರಿಗೆ ಜ್ಞಾನ ಪ್ರಾಪ್ತಿಯಾಗಿಲ್ಲವೋ, ಆದರೆ ಯಾರು ಈ ಜೀವನದಲ್ಲಿ ಒಳ್ಳೆಯ ಕರ್ಮಗಳನ್ನು ಮಾಡಿರುವರೋ, ಅವರು ಕಾಲವಾದಮೇಲೆ ಮೊದಲು ಧೂಮಕ್ಕೆ ಹೋಗುತ್ತಾರೆ. ಅಲ್ಲಿಂದ ರಾತ್ರಿಗೆ, ಅಲ್ಲಿಂದ ದಕ್ಷಿಣಾಯನಕ್ಕೆ, ಅಲ್ಲಿಂದ ಪಿತೃಲೋಕಕ್ಕೆ, ಅಲ್ಲಿಂದ ಆಕಾಶಕ್ಕೆ, ಅಲ್ಲಿಂದ ಚಂದ್ರಲೋಕಕ್ಕೆ ಹೋಗುತ್ತಾರೆ. ಅಲ್ಲಿ ದೇವತೆಗಳ ಆಹಾರವಾಗಿ, ನಂತರ ಅವರಲ್ಲಿ ಹುಟ್ಟಿ ತಮ್ಮ ಪುಣ್ಯ ಕರ್ಮ ಸವೆಯುವವರೆಗೂ ಅಲ್ಲಿರುತ್ತಾರೆ. ತಮ್ಮ ಪುಣ್ಯ ಕರ್ಮ ತೀರಿದ ಮೇಲೆ ಅದೇ ದಾರಿಯಿಂದ ಭೂಮಿಗೆ ಹಿಂತಿರುಗುವರು. ಮೊದಲು ಆಕಾಶ, ನಂತರ ಗಾಳಿ, ನಂತರ ಧೂಮ, ನಂತರ ಹಿಮ ನಂತರ ಮೋಡವಾಗಿ ಮಳೆ ಹನಿಯಂತೆ ಭೂಮಿಗೆ ಬರುತ್ತಾರೆ. ಮನು

ಷ್ಯರು ತಿನ್ನುವ ಆಹಾರದಲ್ಲಿ ಪ್ರವೇಶಿಸಿ ನಂತರ ಕೊನೆಗೆ ಅವರ ಮಕ್ಕಳ
ಹುಟ್ಟುವರು. ಯಾರು ಸುಕರ್ಮಿಗಳೋ, ಅವರು ಉತ್ತಮ ವಂಶದಲ್ಲಿ
ಸುವರು. ಯಾರದು ಕುಕರ್ಮವೊ ಅವರು ಹೀನ ವಂಶದಲ್ಲಿ, ಕೆಲವು ವೇಳೆ ಪ್ರಾ
ಗಳ ಹೊಟ್ಟೆಯಲ್ಲಿ ಕೂಡ ಜನಿಸುವರು. ಒಂದೇ ಸಮನಾಗಿ ಪ್ರಾಣಿಗಳು
ಪ್ರಪಂಚಕ್ಕೆ ಬಂದು ಹೋಗುತ್ತಿವೆ. ಆದಕಾರಣವೆ ಇದು ಖಾಲಿಯಾಗಿ
ಇಲ್ಲ ಭರ್ತಿಯಾಗಿಯೂ ಇಲ್ಲ.

ಇವುಗಳಿಂದಲೂ ಕೂಡ ನಮಗೆ ಅನೇಕ ವಿಷಯಗಳು ಗೊತ್ತಾಗುತ್ತ
ಕೊನೆಗೆ ಇದು ಬಹುಶಃ ಚೆನ್ನಾಗಿ ತಿಳಿಯಬಹುದು. ಇವು ಏನೇ
ನಾವು ಸ್ವಲ್ಪ ಊಹಿಸಬಹುದು. ಕೊನೆಯದಾದ ಸ್ವರ್ಗದಿಂದ ಈ ಪ್ರಪಂ
ಹೇಗೆ ಹಿಂತಿರುಗುವರು ಎಂಬುದು ಮೊದಲನೆ ಭಾಗಕ್ಕಿಂತ ಸ್ವಲ್ಪ ಸ್ಪಷ್ಟವಾ
ಆದರೆ ಇದರ ಒಟ್ಟು ಅಭಿಪ್ರಾಯ ಹೀಗೆಂದು ತೋರುತ್ತದೆ. ಅದೇ ಬ್ರ
ಸಾಕ್ಷಾತ್ಕಾರವಿಲ್ಲದೆ ನಿತ್ಯಸ್ವರ್ಗವಿಲ್ಲವೆಂಬುದು. ಯಾರು ಬ್ರಹ್ಮನನ್ನು ಸಾ
ತ್ಕಾರ ಮಾಡಿಕೊಂಡಿಲ್ಲವೋ, ಆದರೆ ಯಾರು ಒಳ್ಳೆಯ ಕರ್ಮಗಳನ್ನು ಮಾ
ತ್ತಾರೋ (ಫಲಾಪೇಕ್ಷೆಯಿಂದ) ಅವರು ಆ ಮಾರ್ಗ ಈ ಮಾರ್ಗವಾಗಿ ಸ್ವ
ಹೋಗಿ, ನಾವು ಇಲ್ಲಿ ಹುಟ್ಟುವಂತೆ ದೇವತೆಗಳಿಗೆ ಮಕ್ಕಳಾಗಿ ಹುಟ್ಟಿ ಈ
ಪುಣ್ಯಕರ್ಮಗಳ ಫಲ ಸವೆಯುವವರೆಗೆ ಅಲ್ಲಿರುತ್ತಾರೆ. ಇವುಗಳಿಂದ ಬ
ಮುಖ್ಯವಾದ ವೇದಾಂತ ಸಿದ್ಧಾಂತವೊಂದು ಬರುತ್ತದೆ. ಅದೇ ನಾಮ
ಹೊಂದಿದ ಎಲ್ಲಾ ವಸ್ತುಗಳು ಅನಿತ್ಯವೆಂಬುದು. ಈ ಪ್ರಪಂಚ ಕ್ಷ
ಏಕೆಂದರೆ ಇಲ್ಲಿ ನಾಮರೂಪಗಳಿವೆ. ಇದರಂತೆಯೆ ಸ್ವರ್ಗವೂ ಕೂಡ ಕ್ಷ
ವಾಗಿರಬೇಕು; ಏಕೆಂದರೆ ಅಲ್ಲಿಯೂ ಕೂಡ ನಾಮರೂಪಗಳಿವೆ. ನಿತ್ಯಸ್ವ
ಅಸಂಬದ್ಧವಾದುದು. (contradiction). ಏಕೆಂದರೆ ನಾಮರೂಪಗ
ಪ್ರತಿಯೊಂದು ವಸ್ತುವು ಕಾಲದಲ್ಲಿ ಹುಟ್ಟಿ, ಕಾಲದಲ್ಲಿದ್ದು, ಕಾಲದಲ್ಲಿ ಲ
ವಾಗಬೇಕು. ಇವು ವೇದಾಂತದ ಸುನಿಶ್ಚಿತಾರ್ಥವಾದ ಸಿದ್ಧಾಂತ. ಅದಕ
ಸ್ಕರವೆ ಸ್ವರ್ಗವನ್ನು ತ್ಯಜಿಸುವರು.

ಸಂಹಿತೆಗಳಲ್ಲಿ ಬರುವ ಸ್ವರ್ಗಲೋಕವೆಂಬ ಭಾವನೆ ಕ್ರೈಸ್ತರಲ್ಲಿ ಮ
ಮಹಮ್ಮದೀಯರಲ್ಲಿ ರೂಢಿಯಾಗಿರುವಂತೆ ಅನಂತವಾದದ್ದು. ಮಹಮ್ಮ
ಯರು ಇದನ್ನು ಮತ್ತಷ್ಟು ಸ್ಥೂಲವಾಗಿ ಮಾಡಿರುವರು. ಸುಂದರವಾದ
ಗಳು ಅಲ್ಲಿನೆಯೆಂದೂ, ನದಿ ಹರಿಯುತ್ತಿವೆಯೆಂದೂ ಹೇಳುತ್ತಾ
ಅರೇಬಿಯ ಮರಳು ... ... ನೀರಿಗೆ ಇಚ್ಛೆ ಪಡುವರು. ಆದಕಾರಣ

ಮುಹಮ್ಮದಿಯರು ಸ್ವರ್ಗದಲ್ಲಿ ಬೇಕಾದಷ್ಟು ನೀರಿರುವುದೆಂದು ಕಲ್ಪಿಸಿಕೊಳ್ಳುವರು. ಪ್ರತಿ ವರುಷವೂ ಆರು ತಿಂಗಳು ಮಳೆ ಇರುವ ದೇಶದಲ್ಲಿ ನಾನು ಹುಟ್ಟಿದವನು. ಸ್ವರ್ಗವನ್ನು ಅಷ್ಟೇನೂ ಮಳೆಯಿಲ್ಲದ ದೇಶವಾಗಿ ನಾನು ಭಾವಿಸಬೇಕಾಗುವುದು. ಅದರಂತೆಯೇ ಇಂಗ್ಲೀಷಿನವರೂ ಕೂಡ. ಸಂಹಿತೆಯಲ್ಲಿ ಬರುವ ಸ್ವರ್ಗಲೋಕ ಅನಂತವಾದುದು. ಇಲ್ಲಿಂದ ಅಲ್ಲಿಗೆ ಹೋದವರಿಗೆ ಸುಂದರವಾದ ದೇಹಗಳಿರುವುವು. ಅವರ ಪಿತೃಗಳೊಂದಿಗೆ ಅವರು ಅಲ್ಲಿ ವಾಸಿಸುವರು. ನಂತರ ಅವರು ಯಾವಾಗಲೂ ಸುಖವಾಗಿರುವರು. ಅಲ್ಲಿ ಅವರು ತಮ್ಮ ಮಾತಾ ಪಿತೃ ಮಕ್ಕಳು ಮತ್ತು ಇತರ ನಂಟರನ್ನು ನೋಡುವರು. ಇಲ್ಲಿನಂತೆ ಅಲ್ಲಿಯೂ ಕೂಡ ಜೀವನ ನಡೆಸುವರು. ಆದರೆ ಇಲ್ಲಿಗಿಂತ ಹೆಚ್ಚು ಸೌಖ್ಯವೇನೋ ಅಲ್ಲಿರುವುದು, ಅಷ್ಟೆ. ಈ ಜನ್ಮದಲ್ಲಿ ಸುಖಕ್ಕೆ ಇರುವ ಅತಂಕಗಳೆಲ್ಲ ಮಾಯವಾಗಿ ಅವುಗಳ ಸುಖದ ಭಾಗವಾದ ಭೋಗ ಮಾತ್ರ ಉಳಿದಿರುತ್ತದೆ. ಈ ಸ್ಥಿತಿ ಸುಖವೆಂದು ಮಾನವನು ಎಷ್ಟೇ ಭಾವಿಸಿದರೂ ಸತ್ಯಬೇರೆ ಮತ್ತು ಸೌಖ್ಯಬೇರೆ. ಸತ್ಯದ ಪರಮಾವಧಿಯನ್ನು ನಾವು ಮುಟ್ಟುವವರೆವಿಗೂ ಸುಖ ಪ್ರಾಪ್ತವಾಗದ ಹಲವು ಪ್ರಸಂಗಗಳಿವೆ. ಯಾವಾಗಲೂ ಬದಲಾವಣೆ ಬೇಡವೆನ್ನುವುದು, ಮಾನವನ ಸ್ವಭಾವ. ಅದು ಏನಾದರೊಂದನ್ನು ಮಾಡುವುದು: ಅದನ್ನು ಮಾಡಿದ ಮೇಲೆ ಅದರಿಂದ ತಪ್ಪಿಸಿಕೊಳ್ಳುವುದಕ್ಕೆ ಕಷ್ಟವಾಗುತ್ತದೆ. ಮನಸ್ಸು ಹೊಸ ವಿಚಾರಗಳನ್ನು ಸ್ವೀಕರಿಸುವುದಿಲ್ಲ. ಏಕೆಂದರೆ ಆವುಗಳಿಂದ ತೊಂದರೆ ಜಾಸ್ತಿ.

ಉಪನಿಷತ್ತಿನಲ್ಲಿ ಇದರ ದಾರಿಯೇ ಬೇರೆಯಾಗಿರುವುದು ನಮಗೆ ಕಾಣುತ್ತದೆ. ಮಾನವನು ಕಾಲಾನಂತರ ನಂಟರಿಷ್ಟರೊಡನೆ ವಾಸಿಸುವ ಸ್ವರ್ಗ ನಿತ್ಯವಾಗದು. ಏಕೆಂದರೆ ನಾಮರೂಪಗಳುಳ್ಳ ಪ್ರತಿಯೊಂದು ವಸ್ತುವು ನಾಶವಾಗಲೇಬೇಕು. ನಾಮರೂಪಗಳಿಂದ ಕೂಡಿದ ಸ್ವರ್ಗವಿದ್ದರೆ ಕಾಲಾನಂತರದಲ್ಲಿ ಇವು ನಾಶವಾಗಲೇಬೇಕು. ಕೋಟ್ಯಂತರ ವರುಷಗಳು ಅವು ಇರಬಹುದು. ಆದರೆ ಅವು ನಾಶವಾಗುವ ಸಮಯ ಒಂದು ಬಂದೇಬರುವುದು. ಈ ಭಾವಗಳೊಂದಿಗೆ ಮತ್ತೊಂದು ಬಂದಿತು. ಈ ಜೀವಿಗಳು ಪ್ರಪಂಚಕ್ಕೆ ಪುನಃ ಹಿಂತಿರುಗಬೇಕು. ತಮ್ಮ ಪುಣ್ಯಕರ್ಮ ಫಲವನ್ನು ಅನುಭವಿಸುವ ಲೋಕ ಸ್ವರ್ಗ. ಇದರ ಫಲ ತೀರಿದಮೇಲೆ ಪ್ರಪಂಚದಬಾಳಿಗೆ ಮತ್ತೊಮ್ಮೆ ಹಿಂತಿರುಗಬೇಕು. ಇವುಗಳಿಂದ ಒಂದು ವಿಷಯ ಸ್ಪಷ್ಟವಾಗುತ್ತದೆ. ಬಹಳ ಹಿಂದಿನಕಾಲದಲ್ಲೆ ಮಾನವನಿಗೆ ಕಾರ್ಯಕಾರಣ ಸಂಬಂಧದ ತತ್ತ್ವ ವೇದ್ಯವಾಗಿತ್ತು. ಕಾಲಾನಂತರದಲ್ಲಿ ನಮ್ಮ

ತತ್ತ್ವಜ್ಞರು, ಅವನ್ನು ತತ್ತ್ವ ಮತ್ತು ತಾರ್ಕಿಕ ವೇಶದಲ್ಲಿ ತರುವುದನ್ನು ನೋಡುವೆವು. ಆದರೆ ಇಲ್ಲಾದರೂ ಅದು ಬಾಲ ಭಾಷೆಯಲ್ಲಿದೆ. ಈ ಪುಸ್ತಕವನ್ನು ಓದುವುದರಿಂದ ನೀವು ಈನ್ನೊಂದು ವಿಚಾರವನ್ನು ಗಮನಿಸಬೇಕು. ಇವೆಲ್ಲಾ ಅಂತರಂಗ ವೇದ್ಯವಾದುದು. ಇವು ಕಾರ್ಯಾಕಾರಿಯಾಗಬಹುದೆ ಎಂದು ನನ್ನನ್ನು ನೀವು ಕೇಳಿದರೆ, ಇವು ಮೊದಲು ಕಾರ್ಯಾಕಾರಿಯಾಯಿತು ನಂತರ ತತ್ತ್ವವಾಯಿತು ಎನ್ನುವುದೇ ನನ್ನ ಉತ್ತರ. ಮೊದಲು ಇವು ವೇದ್ಯವಾಗಿ ಸಾಕ್ಷಾತ್ಕಾರವಾಯಿತು. ನಂತರ ಇವನ್ನು ಬರವಣಿಗೆಯಲ್ಲಿಟ್ಟರೆಂಬುದನ್ನು ನೀವೇ ನೋಡಬಹುದು. ಪೂರ್ವಕಾಲದ ಜಿಜ್ಞಾಸುಗಳಿಗೆ ಪ್ರಪಂಚ ಮಾತನಾಡಿತು, ಹಕ್ಕಿಗಳು ಮಾತನಾಡಿದವು, ಮೃಗಗಳು ಮಾತನಾಡಿದವು, ಸೂರ್ಯ ಚಂದ್ರರು ಮಾತನಾಡಿದರು. ಕ್ರಮೇಣ ಸ್ವಲ್ಪ ಸ್ವಲ್ಪವಾಗಿ ವಿಷಯವನ್ನು ತಿಳಿದು ಪ್ರಕೃತಿಯ ಅಂತರಾಳಕ್ಕೆ ಪ್ರವೇಶಿಸಿವರು. ಆಲೋಚನೆಯಿಂದ ಅಲ್ಲ. ತರ್ಕ ಪಾಂಡಿತ್ಯದಿಂದ ಅಲ್ಲ. ಇಂದಿನಕಾಲದಲ್ಲಿ ರೂಢಿಯಾಗಿರುವ ಇನ್ನೊಬ್ಬರಿಂದ ವಿಚಾರಗಳನ್ನು ಕದ್ದು ಒಂದು ದೊಡ್ಡ ಪುಸ್ತಕವನ್ನು ಬರೆಯುವುದರಿಂದ ಅಲ್ಲ. ಅಂತಹ ಋಷಿಗಳ ಒಂದು ನುಡಿಯನ್ನು ತೆಗೆದುಕೊಂಡು ಒಂದು ದೀರ್ಘ ಉಪನ್ಯಾಸವನ್ನು ಮಾಡುವ ನನ್ನಂತೆಯೂ ಅಲ್ಲ. ಸಾವಧಾನವಾದ ಪರೀಕ್ಷೆಯಿಂದಲೂ ಮತ್ತು ಅರಸುವಿಕೆಯಿಂದಲೂ ಅವರು ಸತ್ಯವನ್ನು ಕಂಡುಹಿಡಿದರು. ಅವರ ಮುಖ್ಯವಾದ ಮಾರ್ಗವೇ ಅಭ್ಯಾಸ. ಆದಕಾರಣ ಅದರಂತೆಯೇ ಯಾವಾಗಲೂ ಇರಬೇಕು. ಧರ್ಮ ಯಾವಾಗಲೂ ಒಂದು ಕಾರ್ಯಾಕಾರಿಯಾದ ವಿಜ್ಞಾನ ಶಾಸ್ತ್ರ. ಬರಿಯ ಬಾಯಿಮಾತಿನ ಸಿದ್ಧಾಂತಗಳ ಧರ್ಮ ಹಿಂದೆ ಎಂದೂ ಇರಲಿಲ್ಲ. ಮುಂದೆ ಎಂದೂ ಇರಲಾರದು. ಮೊದಲು ಅನುಷ್ಠಾನ, ನಂತರ ಸಿದ್ಧಾಂತ. ಜೀವಿಗಳು ಸ್ವರ್ಗಲೋಕದಿಂದ ಹಿಂತಿರುಗಿ ಬರುತ್ತಾರೆ ಎಂಬ ಭಾವನೆ ಆಗಲೆ ಇದೆ. ಫಲಾಪೇಕ್ಷೆಯಿಂದ ಯಾರು ಸತ್ಕರ್ಮಗಳನ್ನು ಮಾಡುತ್ತಾರೊ ಅವರಿಗೆ ಫಲವೇನೋ ಸಿಕ್ಕುತ್ತದೆ. ಆದರೆ ಪ್ರತಿಫಲವು ಶಾಶ್ವತವಲ್ಲ. ಕಾರಣದ ಪರಿಣಾಮಕ್ಕೆ ತಕ್ಕಂತೆ ಕಾರ್ಯ ಎಂಬ ಕಾರ್ಯಕಾರಣಗಳ ಸಂಬಂಧವನ್ನು ಚೆನ್ನಾಗಿ ಹೇಳಿರುವುದು. ಕಾರಣವಿದ್ದಂತೆ ಪರಿಣಾಮವೂ ಕೂಡ. ಕಾರಣ ಮಿತಿಯಾದುದರಿಂದ ಪ್ರತಿಫಲವೂ ಮಿತಿಯಿಂದಲೇ ಕೂಡಿರಬೇಕು. ಕಾರಣ ಅನಂತವಾಗಿದ್ದರೆ ಕಾರ್ಯವೂ ಕೂಡ ಅನಂತವಾಗಬಲ್ಲದು. ಆದರೆ ಸತ್ಕರ್ಮ ಮುಂತಾದ ಕಾರಣಗಳೆಲ್ಲ ಅಂತ್ಯವಾದುವು. ಆದಕಾರಣ ಇದು ಅನಂತಪರಿಣಾಮವನ್ನು ಉಂಟುಮಾಡಲಾರದು.

ಈಗ ನಾವು ಪ್ರಶ್ನೆಯ ಬೇರೊಂದು ಭಾಗಕ್ಕೆ ಬರುವೆವು. ಹೇಗೆ ಅನಂತ ಸ್ವರ್ಗವಿರಲಾರದೋ, ಅದೇ ಕಾರಣದಿಂದಲೇ ಅನಂತವಾದ ನರಕವೂ ಇರಲಾರದು. ನನ್ನ ಜೀವನದ ಪ್ರತಿಯೊಂದು ಕ್ಷಣದಲ್ಲಿಯೂ ಪಾಪಕರ್ಮಗಳನ್ನು ಮಾಡುವ ದುರಾತ್ಮನು ನಾನೆಂದು ಭಾವಿಸೋಣ. ನನ್ನ ಅನಂತ ಜೀವನಕ್ಕೆ ಹೋಲಿಸಿ ನೋಡಿದರೆ, ಇಂದಿನ ನನ್ನ ಕ್ಷಣಿಕ ಬಾಳು ಗಣನೆಗೆ ಬಾರದು. ಏನಾದರೊಂದು ಅನಂತ ನರಕದ ಶಿಕ್ಷೆ ಇದ್ದರೆ, ಅಂತವುಳ್ಳ ಕಾರಣಗಳಿಂದ ಅನಂತದ ಪರಿಣಾಮವಾಯಿತೆಂದು ಆಗುತ್ತದೆ. ಅದೆಂದಿಗೂ ಹಾಗೆ ಆಗಲಾರದು. ನನ್ನ ಜೀವನವೆಲ್ಲ ಒಳ್ಳೆಯದನ್ನು ಮಾಡುತ್ತಿದ್ದರೂ, ನನಗೆ ಅನಂತ ಸ್ವರ್ಗ ಲಭಿಸಲಾರದು. ಇದೂ ಕೂಡ ಹಿಂದಿನಂತೆ ತಪ್ಪುಮಾಡಿದಂತೆ ಆಗುತ್ತದೆ. ಯಾರಿಗೆ ಸತ್ಯ ಸಾಕ್ಷಾತ್ಕಾರವಾಗಿದೆಯೋ, ಯಾರಿಗೆ ಅದು ತಿಳಿದಿದೆಯೋ ಅವರಿಗೆ ಅನ್ವಯಿಸುವ ಮೂರನೆ ದಾರಿ ಇದೆ. ಈ ಮಾಯಾ ಮೋಹದಿಂದ ತಪ್ಪಿಸಿಕೊಳ್ಳುವುದಕ್ಕೆ, ಸತ್ಯವೇನೆಂಬುದನ್ನು ನಾವು ತಿಳಿಯುವುದಕ್ಕೆ ಇದೊಂದೇ ಹಾದಿ. ಸತ್ಯಾನುಭವವೆಂದರೇನೆಂಬುದನ್ನು ಉಪನಿಷತ್ತು ಬೋಧಿಸುವುದು.

ಅಂದರೆ ಪಾಪ ಪುಣ್ಯಗಳಾವುದನ್ನು ನಾವು ಒಪ್ಪಿಕೊಳ್ಳಕೂಡದು. ಸರ್ವವೂ ಆತ್ಮನಿಂದ ಬರುವುದರಿಂದ, ಆತ್ಮನು ಪ್ರತಿಯೊಂದರಲ್ಲಿಯೂ ಇರುವನು ಎಂದು ತಿಳಿಯಬೇಕು. ಪ್ರಪಂಚವನ್ನು ಇಲ್ಲವೆಂದು ಸಾಧಿಸಬೇಕು. ಪ್ರಪಂಚ ನಮ್ಮ ಪಾಲಿಗೆ ಇಲ್ಲದಂತೆ. ಸ್ವರ್ಗದಲ್ಲಿ ಮತ್ತು ನರಕದಲ್ಲಿ ಮರಣದಲ್ಲಿ ಮತ್ತು ಜೀವನದಲ್ಲಿ ದೇವರನ್ನು ನೋಡಬೇಕು. ನಾನು ನಿಮಗೆ ಓದಿದ ಶ್ಲೋಕದ ಅರ್ಥ ಸರಣಿ ಇದು. ಪೃಥ್ವಿ ದೇವರ ಒಂದು ಚಿಹ್ನೆ. ಆಕಾಶ ದೇವರು. ನಾವಿರುವ ಸ್ಥಳ ದೇವರು. ಎಲ್ಲವೂ ಬ್ರಹ್ಮಮಯವಾಗಿದೆ. ಇದನ್ನು ನಾವು ನೋಡಬೇಕು. ಇದನ್ನು ನಾವು ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಸುಮ್ಮನೆ ಮಾತನಾಡುವುದಲ್ಲ ಅಥವಾ ಆಲೋಚನೆ ಮಾಡುವುದಲ್ಲ. ಇದರ ತಾರ್ಕಿಕ ನಿರ್ಣಯದ ಪರಿಣಾಮವಾಗಿ, ಎಂದು ಆತ್ಮನಿಗೆ ಎಲ್ಲವೂ ಬ್ರಹ್ಮಮಯವೆಂದು ತಿಳಿಯುವುದೋ ಆಗ ಅದು ಸ್ವರ್ಗಕ್ಕೆ ಹೋಗಲಿ, ಅಥವಾ ಇನ್ನು ಎಲ್ಲಿಯಾದರೂ ಹೋಗಲೀ, ಪುನಃ ಅದು ಭೂಮಿಯಲ್ಲಿ ಹುಟ್ಟುವುದೋ, ಅಥವಾ ಸ್ವರ್ಗದಲ್ಲಿ ಹುಟ್ಟುವುದೋ ಯಾವುದನ್ನೂ ಗಣನೆಗೆ ತೆಗೆದುಕೊಳ್ಳುವುದಿಲ್ಲ. ಆತ್ಮನ ಪಾಲಿಗೆ ಇವುಗಳಿರುವುದಕ್ಕೂ ಅರ್ಥವಿಲ್ಲ. ಏಕೆಂದರೆ ಅದಕ್ಕೆ ಎಲ್ಲಾ ಸ್ಥಳವೂ ಸಮನಾಗಿ ಕಾಣುವುದು. ಪ್ರತಿಯೊಂದು ವಸ್ತುವು ದೇವರಿರುವ ಗುಡಿಯಾಗಿದೆ. ಎಲ್ಲಾ ಪ್ರದೇಶವೂ ಪುಣ್ಯಸ್ಥಳವಾಗಿದೆ. ಸ್ವರ್ಗವಾಗಲಿ ನರಕವಾಗಲಿ ಅಥವಾ ಇನ್ನು ಯಾವ

ಸ್ಥಳವೇ ಆಗಲಿ ಅದು ನೋಡುವುದು ಬ್ರಹ್ಮ ಒಂದನ್ನೆ. ಪಾಪ ಪುಣ್ಯಗಳ
ಜನನ ಮರಳಗಳಿಲ್ಲ; ಅನಂತ ಬ್ರಹ್ಮವೊಂದೇ ಇರುವುದು.

ಇಂತಹ ಒಂದು ಅನುಭವಕ್ಕೆ ಮಾನವನು ಬಂದಮೇಲೆ ಅವನು ಸ
ನಾಗುವನು. ವೇದಾಂತದ ದೃಷ್ಟಿಯಿಂದ ಈ ಪ್ರಪಂಚದಲ್ಲಿ ಜೀವಿಸಲು ಯೋ
ನಾದ ಮನುಷ್ಯನು ಅವನೊಬ್ಬನೇ. ಉಳಿದವರು ಅರ್ಹರಲ್ಲ. ಯಾರು
ವನ್ನು ನೋಡುತ್ತಾರೊ ಅವರು ಪ್ರಪಂಚದಲ್ಲಿ ಹೇಗೆ ಬಾಳುವರು?
ಬಾಳೊಂದು ದುಃಖದ ರಾಶಿ. ಯಾರು ಅಪಾಯವನ್ನು ನೋಡುತ್ತಾರೊ
ಬಾಳೊಂದು ದುಃಖದ ರಾಶಿ. ಯಾರು ಸಾವನ್ನು ನೋಡುತ್ತಾರೊ
ಜೀವನ ಒಂದು ದುಃಖದ ರಾಶಿ. ಯಾರಿಗೆ ಸತ್ಯ ಸಾಕ್ಷಾತ್ಕಾರವಾಗಿದೆ
ಯಾರಿಗೆ ಎಲ್ಲಾ ವ್ಯಕ್ತಿಗಳಲ್ಲಿಯೂ ಅದೇ ಸತ್ಯವು ಗೋಚರಿಸುವುದೋ
ಮಾತ್ರ ಈ ಪ್ರಪಂಚದಲ್ಲಿ ಬಾಳ ಬಲ್ಲ. ಅವನು ಮಾತ್ರ "ನಾನು ಈ ಜೀ
ವನ್ನು ಅನುಭವಿಸುತ್ತೇನೆ. ನಾನು ಸುಖವಾಗಿದ್ದೇನೆ" ಎಂದು ಹೇಳ
ಅದಿರಲಿ, ನರಕದ ಭಾವನೆ ವೇದದಲ್ಲೆಲ್ಲಾ ಬರುವುದಿಲ್ಲವೆಂದು ನಾ
ಹೇಳುತ್ತೇನೆ. ಅದು ಬಹಳ ಕಾಲವಾದಮೇಲೆ ಪುರಾಣದಲ್ಲಿ ಬರುವುದು.
ಗಳ ದೃಷ್ಟಿಯಿಂದ ನಮ್ಮ ಶೀಕ್ಷೆಯ ಪರಮಾವಧಿ ಎಂದರೆ ಈ ಪ್ರಪಂ
ಮತ್ತೊಮ್ಮೆ ಬರುವುದು. ಮತ್ತೊಂದು ಅವಕಾಶ ಈ ಪ್ರಪಂಚದಲ್ಲಿ ನ
ಸಿಕ್ಕುವುದು. ಮೊದಲಿನಿಂದಲೇ ಭಾವಗಳು ಅವ್ಯಕ್ತದೆಡೆಗೆ ತಿರುಗುವು
ನೋಡಬಹುದು. ಶಿಕ್ಷೆ ಬಹುಮಾನಗಳೆಂಬ ಭಾವಗಳು ಬಹಳ ಸ್ಥೂಲವಾದ
ಇವು ನಮ್ಮಂತೆ ಒಬ್ಬನನ್ನು ಪ್ರೀತಿಸಿ ಮತ್ತೊಬ್ಬನನ್ನು ದ್ವೇಷಿಸುವ ಮಾನವ
ನಿಗೆ ಮಾತ್ರ ಸರಿಹೋಗುವುದು. ಅಂತಹ ದೇವರಿದ್ದರೆ ಮಾತ್ರ ಬಹು
ಮತ್ತು ಶಿಕ್ಷೆಗೆ ಅವಕಾಶ ಇದೆ. ಸಂಹಿತೆಯಲ್ಲಿ ಅಂತಹ ದೇವರಿದ್ದನು.
ಅಂಜಿಕೆ ಆಗಲೇ ಪ್ರವೇಶಿಸುವುದನ್ನು ನೋಡುವೆವು. ನಾವು ಉಪನಿಷ
ಬಂದೊಡನೆಯೆ ಅದು ಮಾಯವಾಗುವುದು. ನಿರಾಕಾರ ಅದರ ಸ್ಥಾನ
ಆಕ್ರಮಿಸುತ್ತದೆ. ನಿರಾಕಾರ ಭಾವವನ್ನು ತಿಳಿದುಕೊಳ್ಳುವುದು ಸಾಧಾರಣ
ಮಾನವನಿಗೆ ಕಷ್ಟ. ಏಕೆಂದರೆ ಅವನು ಯಾವಾಗಲೂ ಆಕಾರವನ್ನೇ
ಕೊಂಡಿರುವನು. ಬಹಳ ಆಲೋಚನಾಪರರು ಎಂದು ಹೆಸರುಗೊಂಡವರು
ದೇವರ ಅವ್ಯಕ್ತ ಭಾವನೆಗೆ ಅಂಜುವರು. ಆದರೆ ನನಗೇನೋ ದೇವ
ಮಾನವನಂತೆ ಆಲೋಚಿಸುವುದು ಅರ್ಥವಿಲ್ಲದಂತೆ ತೋರುವುದು. ಬದು
ದೇವರೊ ಅಥವಾ ಕಾಲವಾದ ದೇವರೋ, ಯಾವುದು ಉತ್ತಮವಾದ ಆದ

ಯಾರೂ ನೋಡದ ಯಾರೂ ತಿಳಿಯದ ದೇವರೊ ಅಥವಾ ತಿಳಿದ ದೇವರೊ?

ಈ ನಿರಾಕಾರ ದೇವರೆ ಸಚೇತನ ದೇವರು. ಅದು ಒಂದು ತತ್ತ್ವ. ಸಾಕಾರ ನಿರಾಕಾರ ದೇವರಿಗೆ ಇರುವ ವ್ಯತ್ಯಾಸ ಇದು—ಸಾಕಾರ ದೇವರು ಮನುಷ್ಯ ಮಾತ್ರ. ನಿರಾಕಾರ ದೇವನಾದರೊ, ಅವನೇ ಇಂದ್ರಾದಿ ದೇವತೆಗಳು, ಅವನೇ ಮಾನವನು, ಅವನೇ ಪ್ರಾಣಿ. ಅದು ಮಾತ್ರವಲ್ಲದೆ ನಮಗೆ ಕಾಣದ ಇನ್ನು ಏನೇನೊ ಆಗಿರುವನು. ಏಕೆಂದರೆ ನಿರಾಕಾರದಲ್ಲಿ ಸಾಕಾರಗಳೆಲ್ಲ ಸೇರಿವೆ. ಸೃಷ್ಟಿಯಲ್ಲಿರುವ ಸಕಲ ವಸ್ತುಗಳ ಮೊತ್ತ ಅವನು. ಇದು ಮಾತ್ರವಲ್ಲ, ಇದನ್ನೂ ಕೂಡ ಮೀರಿರುವನು. "ಹೇಗೆ ಅಗ್ನಿಯೊಂದು ಜಗತ್ತಿಗೆ ಬಂದು ನಾನಾ ರೂಪದಲ್ಲಿ ಪ್ರಕಾಶಿಸುತ್ತಿದ್ದರೂ, ಅದು ಹೇಗೆ ಇವುಗಳೆಲ್ಲವನ್ನು ಅಧಿಕ ಪಾಲು ಮೀರಿದೆಯೊ" ಅದರಂತೆಯೇ ನಿರಾಕಾರವೂ ಕೂಡ.

ನಾವೊಬ್ಬ ಸಚೇತನ ದೇವರನ್ನು ಪೂಜಿಸಬೇಕು. ನನ್ನ ಜೀವನದಲ್ಲೆಲ್ಲಾ ನಾನು ದೇವರಲ್ಲದೆ ಬೇರೆ ಯಾವುದನ್ನೂ ನೋಡಿಲ್ಲ. ನೀವೂ ಕೂಡ ಅದರಂತೆಯೇ. ನೀವು ಈ ಕುರ್ಚಿಯನ್ನು ನೋಡಬೇಕಾದರೆ ಮೊದಲು ದೇವರನ್ನು ನೋಡಬೇಕು. ನಂತರ ಅವನಿಂದ ಅವನ ಮೂಲಕ ಮಾತ್ರ ನೀವು ಕುರ್ಚಿಯನ್ನು ನೋಡಬಹುದು. "ಸೋಹಂ" ಎಂದು ಅವನು ಎಲ್ಲಾ ಕಡೆಯಲ್ಲಿಯೂ ಇರುವನು. "ಸೋಹಂ" ಎಂದು ನೀನು ಹೇಳಿದ ತಕ್ಷಣವೆ ನಿನಗೆ ಅಸ್ತಿತ್ವದ ಪ್ರಜ್ಞೆ ಇದೆ. ನಮ್ಮ ಹೃದಯದ ಕಮಲದಲ್ಲಿ ಮತ್ತು ಪ್ರತಿಯೊಂದು ಸಚೇತನವಾದ ಪ್ರಾಣಿಯ ಅಂತರಾಳದಲ್ಲಿ ಅದನ್ನು ನೋಡದೆ ಮತ್ತೆಲ್ಲಿಗೆ ಅವನನ್ನು ನೋಡುವುದಕ್ಕೆ ಹೋಗುವುದು? "ಪುರುಷನು ನೀನೆ, ಸ್ತ್ರೀಯು ನೀನೆ, ಕುಮಾರಿಯು ನೀನೆ, ಕುಮಾರನು ನೀನೆ. ಕೋಲೂರಿಕೊಂಡು ನಡುಗುತ್ತ ನಡೆಯುವ ಮುದುಕನು ನೀನೆ. ನವಶಕ್ತಿ ಉತ್ಸಾಹದಿಂದ ಧೈರ್ಯವಾಗಿ ಚಲಿಸುವ ಯುವಕನು ನೀನೆ." ಇರುವ ಸಕಲವೂ ನೀನೆ. ಪ್ರಪಂಚದಲ್ಲಿ ಸತ್ಯವಾಗಿರುವ ಏಕಮಾತ್ರ ಸಚೇತನವಾದ ಅದ್ಭುತವಾದ ಬ್ರಹ್ಮನು ನೀನೆ. ಎಲ್ಲಿಯೋ ಯಾರೂ ನೋಡದ ತೆರೆಯ ಹಿಂದೆ ಇರುವ ಸಂಪ್ರದಾಯವಂತರ ದೇವರ ಭಾವಕ್ಕೆ ಇದು ವಿರೋಧವಾಗಿ ತೋರುತ್ತದೆ. ಪೂಜಾರಿಗಳು ಮಾತ್ರ ಭರವಸೆ ಕೊಡುತ್ತಾರೆ. ಅವರು ಹೇಳಿದಂತೆ ನಡೆದರೆ, ಅವರ ನಿಂದೆಯನ್ನೆಲ್ಲಾ ಸಾವಧಾನವಾಗಿ ಕೇಳಿದರೆ, ನಮಗೆ ಅವರು ತೋರುವ ದಾರಿಯಲ್ಲಿ ನಡೆದರೆ, ನಾವು ಕಾಲವಾದ ಮೇಲೆ, ದೇವರನ್ನು ಪ್ರತ್ಯಕ್ಷವಾಗಿ ಕಾಣುವಂತೆ ಮಾಡುವ ಒಂದು ಅಪ್ಪಣೆ ಚೀಟಿಯನ್ನು ಕೊಡುತ್ತಾರೆ! ಈ ಸ್ವರ್ಗದ ಕಟ್ಟು ಕಥೆಗಳೆಲ್ಲ

ಕೆಲಸಕ್ಕೆ ಬಾರದ ಪೂಜಾರಿಯ ಕಲ್ಪನೆಯಲ್ಲದೆ ಮತ್ತೇನು?

ನಿರಾಕಾರಭಾವನೆ ಧ್ವಂಸಕಾರಿಯೇನೊ ನಿಜ. ಇದು, ಪೂಜಾರಿ ಚರ್ಚು, ಗುಡಿ ಇವರ ಕೈಯಿಂದ ವ್ಯಾಪಾರವೆಲ್ಲವನ್ನು ಕಸಿದುಕೊಳ್ಳುವುದು. ಭರತಖಂಡ ದಲ್ಲಿ ಈಗ ಕ್ಷಾಮಗಾಲ. ಆದರೆ ಅಲ್ಲಿ ಕೆಲವು ಗುಡಿಗಳಲ್ಲಿ ರಾಜನನ್ನು ಬಿಡಿಸಿ ಕೊಳ್ಳುವಷ್ಟು ಬೆಲೆಬಾಳುವ ಒಡವೆಗಳಿವೆ! ಜನರಿಗೆ ಈ ನಿರಾಕಾರ ಬೋಧನೆ ಯನ್ನು ಪೂಜಾರಿಗಳು ಬೋಧಿಸಿದರೆ, ಅವರ ಕಸಬಿಗೆ ಆತಂಕಬರುವುದು. ಆದರೂ ಕೂಡ ನಾವು ಪೂಜಾರಿಗಳ ಸಂಪರ್ಕವಿಲ್ಲದೆ ನಿಸ್ವಾರ್ಥತೆಯಿಂದ ಈ ಭಾವಗಳನ್ನು ಬೋಧಿಸಬೇಕು. ನೀನೂ ದೇವರು, ನಾನೂ ದೇವರು. ಯಾರು ಯಾರ ಆಣತಿಯನ್ನು ಪಾಲಿಸಬೇಕು? ಯಾರು ಯಾರನ್ನು ಪೂಜಿಸಬೇಕು. ದೇವರ ಅತ್ಯುತ್ತಮ ದೇಗುಲ ನೀನು. ಬೇರಾವ ಗುಡಿಯನ್ನೋ, ವಿಗ್ರಹವನ್ನೊ ಗ್ರಂಥವನ್ನೊ ಪೂಜಿಸುವ ಬದಲು ನಿನ್ನನ್ನು ನಾನು ಪೂಜಿಸುತ್ತೇನೆ. ಕೆಲವ ರೇತಕ್ಕೆ ತಮ್ಮ ಆಲೋಚನೆಯಲ್ಲಿ ಇಷ್ಟು ವಿರೋಧಾಭಾಸದಿಂದ ಕೂಡಿಕೊಂಡಿರು ವರು. ಅವರು ನಮ್ಮ ಕೈಗಳಿಂದ ನುಣುಚಿಕೊಳ್ಳುವ ಮೀನಿನಂತೆ ಇರುವರು. ತಾವು ಸಂಪೂರ್ಣ ಕಾರ್ಯಕಾರಿ ದೃಷ್ಟಿಯವರೆಂದು ಹೇಳಿಕೊಳ್ಳುವರು. ಅದು ಒಳ್ಳೆಯದೆ. ಇಲ್ಲಿ ನಿನ್ನನ್ನು ಪೂಜಿಸುವುದಕ್ಕಿಂತ ಹೆಚ್ಚು ಕಾರ್ಯಾಕಾರಿ ಯಾವುದು! ನಾನು ನಿನ್ನನ್ನು ನೋಡುತ್ತೇನೆ, ನಾನು ನಿನ್ನನ್ನು ತಿಳಿಯುತ್ತೇನೆ ಮತ್ತು ನೀನು ದೇವರೆಂದು ನನಗೆ ಗೊತ್ತಿದೆ. ಮಹಮ್ಮದೀಯರು "ಅಲ್ಲ" ನಲ್ಲದೆ ಬೇರೆ ದೇವರಿಲ್ಲ ಎನ್ನುತ್ತಾರೆ. ವೇದಾಂತವಾದರೋ, ದೇವರಿಲ್ಲದ ವಸ್ತು ಮತ್ತಾವುದೂ ಇಲ್ಲ ಎನ್ನುತ್ತದೆ. ನಿಮ್ಮಲ್ಲಿ ಅನೇಕರನ್ನು ಇದು ಅಂಜಿಸಬಹುದು. ಆದರೆ ಕ್ರಮೇಣ ನಿಮಗೆ ಇದು ಗೊತ್ತಾಗುವುದು. ಜೀವಂತನಾಗಿರುವ ದೇವರು ನಿಮ್ಮಲ್ಲಿರುವನು. ಆದರೂ ಕೆಲಸಕ್ಕೆ ಬಾರದ ಕಟ್ಟು ಕಥೆ ನಂಬಿ ಚರ್ಚು ಗುಡಿ ಇವನ್ನು ಕಟ್ಟುತ್ತಿರುವಿರಿ. ಮನುಜ ದೇಹದಲ್ಲಿ ಮಾನವ ಜೀವನವೊಂದೆ ನಾವು ಪೂಜಿಸಬೇಕಾದ ವಸ್ತು. ಎಲ್ಲಾ ಪ್ರಾಣಿಗಳ ದೇಹವೂ ಕೂಡ ದೇವರ ಗುಡಿಯೇನೊ ಹೌದು. ಆದರೆ ಮಾನವನದು ಅತ್ಯುತ್ತಮವಾದುದು. ಗುಡಿ ಗಳಲ್ಲಿ ತಾಜ್‌ಮಹಲ್ ಇದ್ದಂತೆ. ಅದರಲ್ಲಿ ನನಗೆ ಪೂಜಿಸಲು ಆಗದೆ ಇದ್ದರೆ ಉಳಿದ ಎಂತಹ ದೇವಸ್ಥಾನಗಳಿಂದಲೂ ಪ್ರಯೋಜನವಿಲ್ಲ. ಪ್ರತಿಯೊಂದು ಮಾನವ ದೇಹದ ಗುಡಿಯಲ್ಲೂ, ಕುಳಿತಿರುವ ದೇವರು ನನಗೆ ತಿಳಿದ ಒಡನೆ, ಪ್ರತಿಯೊಬ್ಬ ಮಾನವನೆದುರು ಭಕ್ತಿಯಿಂದ ನಮ್ರನಾಗಿ ನಿಂತುಕೊಂಡು ದೇವ ರನ್ನು ಕಂಡೊಡನೆಯೆ, ಬಂಧನದಿಂದ ಮುಕ್ತನಾಗುವನು. ನನ್ನನ್ನು ಬಂಧಿ

ಸಿದುದೆಲ್ಲ ಮಾಯವಾಗುವುದು. ನಾನು ಮುಕ್ತಾತ್ಮನಾಗುವೆನು.

ಇದೊಂದೆ ಎಲ್ಲಾ ಪೂಜೆಗಿಂತಲೂ ಹೆಚ್ಚು ಕಾರ್ಯಕಾರಿಯಾದುದು. ಸಿದ್ಧಾಂತ ಮತ್ತು ಊಹೆ ಇವಕ್ಕೆ ಸಂಬಂಧವಿಲ್ಲ. ಆದರೂ ಇದು ಅನೇಕರನ್ನು ಅಂಜಿಸುತ್ತದೆ. ಅವರು, ಇದು ಸರಿಯಲ್ಲವೆನ್ನುತ್ತಾರೆ. ಎಲ್ಲಿಯೋ ಸ್ವರ್ಗದಲ್ಲಿ, ದೇವರು ಯಾರಿಗೊ ತಾನು ದೇವರೆಂದು ಹೇಳಿದನು ಎಂಬ ತಮ್ಮ ಮುತ್ತಾತಂದಿರಿಂದ ಕೇಳಿದ ಪುರಾತನ ಭಾವನೆಗಳನ್ನು ಮೆಲಕು ಹಾಕುತ್ತಾರೆ. ಅಂದಿನ ಕಾಲದಿಂದಲೂ ನಮಗೆ ಇರುವುದು ಬರಿಯ ಸಿದ್ಧಾಂತಗಳೆ. ಅವರ ದೃಷ್ಟಿಯಿಂದ ಇದು ಕಾರ್ಯಕಾರಿ, ನಮ್ಮ ಭಾವನೆಗಳು ಅಲ್ಲ! ಪ್ರತಿಯೊಬ್ಬನಿಗೂ ತನ್ನದೇ ಒಂದು ದಾರಿ ಇರಬೇಕೆಂದು ವೇದಾಂತ ಹೇಳುತ್ತದೆ. ಇದರಲ್ಲಿ ಸಂದೇಹ ವೇನೂ ಇಲ್ಲ. ಆದರೆ ದಾರಿಯೆ ಗುರಿಯಲ್ಲ. ಸ್ವರ್ಗದಲ್ಲಿರುವ ದೇವರನ್ನು ಪೂಜಿಸುವುದು ಮುಂತಾದುವು ಕೆಟ್ಟದ್ದೇನೂ ಅಲ್ಲ. ಅದೆಲ್ಲ ಸತ್ಯದೆಡೆಗೆ ನಿಮ್ಮನ್ನು ಕೊಂಡೊಯ್ಯುವ ಮೆಟ್ಟಲು, ಅವೇ ಸತ್ಯವಲ್ಲ. ಅವು ಹಿತಕಾರಿ, ಮತ್ತು ಸುಂದರವಾಗಿವೆ. ಕೆಲವು ಅದ್ಭುತ ಭಾವನೆಗಳೂ ಅದರಲ್ಲಿದೆ. ಆದರೆ ಪ್ರತಿಯೊಂದು ಕಡೆಯೂ ವೇದಾಂತ, "ನನ್ನ ಸ್ನೇಹಿತನೆ, ಯಾರನ್ನು ನೀನು ತಿಳಿಯದವನೆಂದು ಪೂಜಿಸುತ್ತಿರುವೆಯೋ, ಅವನೇ ನೀನೆಂದು ನಾನು ಪೂಜಿಸುತ್ತೇನೆ. ಯಾರನ್ನು ನೀನು ತಿಳಿಯಲಾರದವನೆಂದು ತಿಳಿದು ಜಗದಲ್ಲಿ ಅರಸುತ್ತಿರುವೆಯೋ, ಅವನು ಸದಾ ಕಾಲದಲ್ಲಿಯೂ ನಿನ್ನಲ್ಲಿರುವನು. ಅವನಿಂದ ಮಾತ್ರ ನೀನು ಬದಕಿರುವೆ. ಆತನೇ ಪ್ರಪಂಚದ ನಿತ್ಯಸಾಕ್ಷಿ" "ವೇದಗಳು ಯಾರನ್ನು ಪೂಜಿಸುತ್ತವೆಯೋ, ಇಲ್ಲಿ ಅದಕ್ಕಿಂತಲೂ ಹೆಚ್ಚು. ನಿತ್ಯವಾದ "ಅಹಂ" ಎಂಬಲ್ಲಿ ಯಾರು ಯಾವಾಗಲೂ ಇರುವನೋ, ಯಾರಿರುವುದರಿಂದ ಪ್ರಪಂಚ ಇರುವುದೋ, ಅವನೇ ಸೃಷ್ಟಿಯ ಬೆಳಕು ಮತ್ತು ಜೀವ. "ಅಹಂ" ಎಂಬುದು ನಿನ್ನಲ್ಲಿರದೇ ಇದ್ದರೆ, ನೀನು ಸೂರ್ಯನನ್ನು ನೋಡುತ್ತಿರಲಿಲ್ಲ. ಎಲ್ಲಾ ಕತ್ತಲೆಯ ಮೊತ್ತವಾಗುತ್ತಿತ್ತು. ಅವನು ಪ್ರಕಾಶಿಸುವುದರಿಂದ ನೀನು ಪ್ರಪಂಚವನ್ನು ನೋಡುವೆ.

ಸಾಧಾರಣವಾಗಿ ಒಂದು ಪ್ರಶ್ನೆಯನ್ನು ಕೇಳುವರು. ಅದು ಇದು. ಇದು ನನ್ನನ್ನು ಅನಂತ ಕಷ್ಟಕ್ಕೆ ಈಡುಮಾಡುವುದು. ನಮ್ಮಲ್ಲಿ ಪ್ರತಿಯೊಬ್ಬರೂ, ನಾನೇ ದೇವರು, ನಾನು ಏನು ಮಾಡುತ್ತೇನೆಯೋ ಆಲೋಚಿಸುತ್ತೇನೆಯೋ ಅದೆಲ್ಲವೂ ಒಳ್ಳೆಯದಾಗಬೇಕು. ಏಕೆಂದರೆ ದೇವರೆಂದಿಗೂ ಕೇಡನ್ನು ಬಯಸುವುದಿಲ್ಲ ಎನ್ನಲು ಮೊದಲು ಮಾಡಬಹುದು. ಮೊದಲನೆಯ

ದಾಗಿ ಈ ವಿಪರೀತ ತರ್ಕವನ್ನು ಸರಿ ಎಂದು ಒಪ್ಪಿಕೊಂಡರೂ, ಬೇರೆಯ ದೃಷ್ಟಿಯಿಂದ ಅಪಾಯವಿಲ್ಲವೆಂದು ನೀವು ಸಕಾರಣವಾಗಿ ತೋರುವಿರೇನು? ತಮ್ಮಿಂದ ಬೇರೆಯಾದ ಸ್ವರ್ಗದಲ್ಲಿರುವ ದೇವರನ್ನು ಅವರು ಪೂಜಿಸುವರು. ಅವನಿಗೆ ಅಂಜುವರು. ಇದರಿಂದ ಪ್ರಪಂಚ ಬಹಳ ಉತ್ತಮವಾಯಿತೇನು? ಪ್ರಪಂಚದ ಮಹಾ ಅದ್ಭುತ ಕರ್ಮಪಟುಗಳು ಮತ್ತು ಪ್ರಪಂಚದ ಧಾರ್ಮಿಕ ಶಕ್ತಿಯನ್ನು ಪಡೆದವರು ಇರುವುದು ಸಾಕಾರ ದೇವರ ಉಪಾಸಕರಲ್ಲೊ ಅಥವಾ ನಿರಾಕಾರ ದೇವರ ಉಪಾಸಕರಲ್ಲೊ? ನಿಜವಾಗಿಯೂ ನಿರಾಕಾರ ಬ್ರಹ್ಮನ ಉಪಾಸಕರಲ್ಲಿ. ಅಂಜಿಕೆಯಿಂದ ನೀತಿ ಹೇಗೆ ಬೆಳೆಯುವುದು? ಇದು ಎಂದಿಗೂ ಇಲ್ಲ "ಎಲ್ಲಿ ಒಬ್ಬನು ಇನ್ನೊಬ್ಬನನ್ನು ನೋಡುತ್ತಾನೊ, ಎಲ್ಲಿ ಒಬ್ಬನು ಇನ್ನೊಬ್ಬನನ್ನು ಹಿಂಸಿಸುತ್ತಾನೊ ಅದೇ ಮಾಯ. ಎಲ್ಲಿ ಒಬ್ಬನು ಇನ್ನೊಬ್ಬನನ್ನು ನೋಡುವುದಿಲ್ಲವೊ ಒಬ್ಬನು ಇನ್ನೊಬ್ಬನನ್ನು ಹಿಂಸಿಸುವುದಿಲ್ಲವೋ, ಎಲ್ಲವೂ ಆತ್ಮಮಯವಾಗಿರುವುದೊ ಅಲ್ಲಿ ಯಾರು ಯಾರನ್ನು ನೋಡುವರು? ಯಾರು ಯಾರನ್ನು ಕಂಡುಹಿಡಿಯುವರು?" ಎಲ್ಲವೂ ಅವನೆ, ಮತ್ತು ಅದೇ ಕಾಲದಲ್ಲಿ ಎಲ್ಲವೂ ನಾನೆ. ಆತ್ಮ ಪರಿಶುದ್ಧವಾಗಿದೆ. ಆಗ ಮಾತ್ರ ಪ್ರೇಮವೆಂದರೇನೆಂಬುದು ನಮಗೆ ಗೊತ್ತಾಗುವುದು. ಪ್ರೇಮವೆಂದಿಗೂ ಅಂಜಿಕೆಯಿಂದ ಉದಯಿಸುವುದಿಲ್ಲ. ಪ್ರೇಮಕ್ಕೆ ಮೂಲ ಸ್ವಾತಂತ್ರ್ಯ. ನಿಜವಾಗಿಯೂ ನೀವು ಪ್ರಪಂಚವನ್ನು ಪ್ರೀತಿಸುವುದಕ್ಕೆ ಪ್ರಯತ್ನಿಸಿದಾಗ ಮಾತ್ರ, ಸಹೋದರತ್ವ ಮತ್ತು ಮಾನವತೆ ಎಂದರೇನೆಂದು ಗೊತ್ತಾಗುವುದು. ಅದಕ್ಕೆ ಮುಂಚೆ ಅಲ್ಲ.

ಆದಕಾರಣ ನಿರಾಕಾರ ಭಾವನೆ ಪ್ರಪಂಚದಲ್ಲಿ ಅತ್ಯಂತ ಭೀಕರವಾದ ಪಾಪಕ್ಕೆ ದಾರಿಯಾಗುತ್ತದೆ ಎನ್ನುವುದು ಸರಿಯಲ್ಲ. ಮಿಕ್ಕ ಸಿದ್ಧಾಂತಗಳಿಂದ ಭಯಂಕರ ಪಾಪಕ್ಕೆ ದಾರಿಯಾಗಲಿಲ್ಲವೇನೊ? ಮತಭ್ರಾಂತಿಯಿಂದ ರಕ್ತದ ಕಾಲುವೆಯನ್ನು ಹರಿಸಿ ಮಾನವರನ್ನು ಒಬ್ಬರು ಇನ್ನೊಬ್ಬರನ್ನು ಚೂರು ಚೂರು ಮಾಡುವಂತೆ ಪ್ರೇರೇಪಿಸಲಿಲ್ಲವೇನೊ? "ನನ್ನ ದೇವರೆ ಸರ್ವೋತ್ತಮನಾದ ದೇವರು. ಇಬ್ಬರೂ ಯುದ್ಧಮಾಡಿ ಇದನ್ನು ನಿಶ್ಕರ್ಷಿಸೋಣ" ಪ್ರಪಂಚದಲ್ಲೆಲಾ ದ್ವೈತದ ಪರಿಣಾಮವೆ ಇದು. ಬನ್ನಿ ವಿಶಾಲವಾದ ಯಾವ ಆತಂಕವೂ ಇಲ್ಲದ ಹಗಲ ಬೆಳಕಿಗೆ. ಚಿಕ್ಕ ಚಿಕ್ಕ ಸಂದಿಗೊಂದಿಗಳಿಂದ ಹೊರಗೆ ಬನ್ನಿ. ಅನಂತಾತ್ಮ ಹೇಗೆ ಸಣ್ಣ ಬಿಲದಲ್ಲಿ ಜನಿಸಿ ಸಾಯುವುದಕ್ಕೆ ಒಪ್ಪುವುದು? ಬನ್ನಿ ಹೊರಗೆ ಬೆಳಕಿನ ಪ್ರಪಂಚಕ್ಕೆ. ಪ್ರಪಂಚದಲ್ಲಿರುವ ಸಕಲವೂ ನಿಮ್ಮದು. ನಿಮ್ಮ ಬಾಹುಗಳನ್ನು ನೀಡಿ ಪ್ರೇಮದಿಂದ ಆಲಂಗಿಸಿ. ಹೀಗೆ ಮಾಡಬೇಕೆಂದು

ನಿಮಗೆ ಎಂದಾದರೂ ಅನ್ನಿಸಿದ್ದರೆ ನಿಮಗೆ ದೇವರ ದರ್ಶನವಾದಂತೆ.

ಬುದ್ಧದೇವನ ಉಪದೇಶದಲ್ಲಿ ಹೇಗೆ ಆತನು ಅದ್ಭುತವಾದ ಅನಂತವಾದ ಪ್ರೇಮದ ಆಲೋಚನೆಯನ್ನು ನಾಲ್ಕು ದಿಕ್ಕುಗಳಿಗೆ ಮೇಲೆ ಕೆಳಗೆ, ವಿಶ್ವವೆಲ್ಲವೂ ಇದರಿಂದ ತುಂಬಿ ತುಳುಕಾಡುವಂತೆ ಕಳುಹಿಸಿದನು, ಎಂಬುದು ನಿಮಗೆ ಜ್ಞಾಪಕವಿದೆ. ಅಂತಹ ವಿಶ್ವಾನುಕಂಪ ನಿಮ್ಮ ಎದೆಯಲ್ಲಿದ್ದರೆ ಆಗ ನಿಜವಾದ ವ್ಯಕ್ತಿತ್ವ ನಿಮ್ಮಲ್ಲಿರುವುದು. ವಿಶ್ವವೇ ಒಂದು ವಿರಾಟ್‌ವ್ಯಕ್ತಿ. ಅಲ್ಪ ವಸ್ತುಗಳನ್ನು ತೊರೆಯಿರಿ. ಮಹತ್ತಿಗೆ ಅಲ್ಪವನ್ನು ತ್ಯಾಗಮಾಡಿ. ಕ್ಷುದ್ರ ಭೋಗಗಳನ್ನು ಸಚ್ಚಿದಾನಂದಕ್ಕೋಸುಗ ತೊರೆಯಿರಿ. ಇವೆಲ್ಲವೂ ನಿಮ್ಮದು. ನಿರಾಕಾರ ಸಾಕಾರವನ್ನು ಒಳಗೊಂಡಿದೆ. ಆದಕಾರಣ ದೇವರು ಏಕ ಕಾಲದಲ್ಲಿ ಸಾಕಾರ ಮತ್ತು ನಿರಾಕಾರ. ಅನಂತವಾದ ನಿರಾಕಾರವಾದ ಮಾನವನು ಆಕಾರದಂತೆ ವ್ಯಕ್ತಗೊಳಿಸುತ್ತಿರುವನು. ಅನಂತವಾದ ನಾವು ಸಾಂತವಾಗಿ ಸಂಕೋಚವಾದಂತೆ ತೋರುವೆವು. ಅನಂತವೆ ನಮ್ಮ ನಿಜವಾದ ನೀತಿಯೆಂದು ವೇದಾಂತ ಸಾರುತ್ತದೆ. ಅದು ಎಂದಿಗೂ ಮಾಯವಾಗುವುದಿಲ್ಲ. ಅದು ಎಂದೆಂದಿಗೂ ಚಿರಸ್ಥಾಯಿಯಾಗುವುದು. ನಮ್ಮ ಕರ್ಮದಿಂದ ನಮಗೆ ನಾವೇ ಮಿತಿಯನ್ನು ಕಲ್ಪಿಸಿಕೊಳ್ಳುತ್ತಿರುವೆವು. ಆ ಕರ್ಮವೇ ನಮ್ಮ ಕೊರಳಿಗೆ ಕಟ್ಟಿದ ಸರಪಳಿಯಂತೆ ನಮ್ಮನ್ನು ಈ ಸ್ಥಿತಿಗೆ ತಂದಿರುವುದು. ಆ ಸರಪಳಿಯನ್ನು ಕಿತ್ತು ಹಾಕಿ ಸ್ವತಂತ್ರರಾಗಿ. ನಿಯಮವೆಂಬುದನ್ನು ನಿಮ್ಮ ಕಾಲಿನಿಂದ ತುಳಿಯಿರಿ. ಮಾನವಪ್ರಕೃತಿಯಲ್ಲಿ ನಿಯಮವೆಂಬುದಿಲ್ಲ, ಹಣೆಯ ಬರಹವೆಂಬುದಿಲ್ಲ, ಅದೃಷ್ಟವೆಂಬುದಿಲ್ಲ. ಅನಂತದಲ್ಲಿ ನಿಯಮ ಹೇಗೆ ಬರುವುದು? ಸ್ವಾತಂತ್ರವೇ ಅವರ ಪಲ್ಲವಿ. ಅದರ ಸ್ವಭಾವವೇ ಸ್ವಾತಂತ್ರ್ಯ. ಸ್ವಾತಂತ್ರ್ಯವೇ ಅದರ ಆಜನ್ಮಸಿದ್ಧ ಹಕ್ಕು. ಮೊದಲು ಸ್ವತಂತ್ರರಾಗಿ. ನಂತರ ನಿಮಗೆ ಬೇಕಾದಷ್ಟು ಆಕಾರಗಳನ್ನು ಇಟ್ಟುಕೊಳ್ಳಿ. ನಂತರ ರಂಗಭೂಮಿಗೆ ಬಂದು ಭಿಕ್ಷುಕನ ಪಾತ್ರವನ್ನು ನಟಿಸುವ ಪಾತ್ರಧಾರಿಯಂತೆ ನಾವು ಆಡುತ್ತೇವೆ. ದಾರಿಯಲ್ಲಿ ನಡೆಯುವ ನಿಜವಾದ ಭಿಕ್ಷುಕನೊಂದಿಗೆ ಅವನನ್ನು ಹೋಲಿಸಿ ನೋಡಿ. ಎರಡುಕಡೆಯಲ್ಲೂ ಬಹುಶಃ ನೋಟ ಒಂದೆ, ಮಾತು ಒಂದೇ ಆಗಿರುವುದು. ಆದರೂ ಎಷ್ಟು ವ್ಯತ್ಯಾಸ. ಒಬ್ಬನು ತನ್ನ ಭಿಕ್ಷುಕನ ಪಾತ್ರದಿಂದ ಆನಂದಿಸುವನು, ಮತ್ತೊಬ್ಬನು ಅದರಿಂದ ದುಃಖಿಸುವನು. ಈ ಅಂತರಕ್ಕೆ ಕಾರಣವೇನು? ಒಬ್ಬನು ಮುಕ್ತ. ಮತ್ತೊಬ್ಬ ಬದ್ಧ. ಪಾತ್ರಧಾರಿಗೆ ತನ್ನ ಭಿಕ್ಷಾವೃತ್ತಿ ನಿಜವಲ್ಲವೆಂದೂ, ಕೇವಲ ಆಟಕ್ಕಾಗಿ ನಟಿಸಿರುವನೆಂದೂ, ಗೊತ್ತಿದೆ. ಆದರೆ

ನಿಜವಾದ ಭಿಕ್ಷುಕನಾವರೋ, ಅದೇ ತನ್ನ ನಿಜಸ್ವಭಾವವೆಂದೂ, ತನಗೆ ಅದು ಬೇಕಾಗಲೀ, ಬೇಡವಾಗಲೀ, ಸಹಿಸಬೇಕೆಂಬುದು ಗೊತ್ತಿದೆ. ಇದೇ ನಿಯಮ. ಎಲ್ಲಿಯವರೆಗೆ ನಮಗೆ ಸಹಜಸ್ಥಿತಿಯು ಅನುಭವವಿರುವುದಿಲ್ಲವೋ ಅಲ್ಲಿಯ ವರೆಗೂ ನಾವು ಭಿಕ್ಷುಕರು. ಪ್ರಕೃತಿಯ ಪ್ರತಿಯೊಂದು ಶಕ್ತಿಯೂ ನಮ್ಮನ್ನು ನಡುಗಿಸುತ್ತದೆ. ಪ್ರಕೃತಿಯಲ್ಲಿರುವ ಪ್ರತಿಯೊಂದೂ ನಮ್ಮನ್ನು ಗುಲಾಮ ನ್ನಾಗಿ ಮಾಡುವುದು. ಸಹಾಯಕ್ಕೋಸುಗವಾಗಿ ಪ್ರಪಂಚದಲ್ಲೆಲ್ಲಾ ಮೊರೆ ಇಡುವೆವು. ಆದರೆ ಸಹಾಯ ನಮಗೆ ಎಂದಿಗೂ ಬರುವುದಿಲ್ಲ. ಕಾಲ್ಪನಿಕ ದೇವರನ್ನು ನಾವು ಬೇಡುವೆವು. ಆದರೂ ಸಹಾಯ ಬರುವುದಿಲ್ಲ. ಇಷ್ಟಾ ದರೂ, ಸಹಾಯ ಬರುತ್ತದೆ ಎಂದು ನಾವು ನೆಚ್ಚುತ್ತೇವೆ. ಹೀಗೆ ಅಳುವುದು ಗೋಳಿಡುವುದು ನೆಚ್ಚುವುದು ಇದರಲ್ಲಿ ಒಂದು ಜೀವನ ವ್ಯರ್ಥವಾಯಿತು. ಇದೇ ಆಟ ಪುನಃ ಪುನಃ ನಡೆಯುತ್ತಿರುತ್ತದೆ.

ಸ್ವತಂತ್ರರಾಗಿ. ಯಾರಿಂದಲೂ ಏನನ್ನು ನೆಚ್ಚಬೇಡಿ. ಇದುವರೆಗೆ ನಿಮಗೆ ಆಗಿರುವುದನ್ನು ಪರೀಕ್ಷೆ ಮಾಡಿನೋಡಿದರೆ, ಎಂದೆಂದಿಗೂ ಬರದ ಇನ್ನೊಬ್ಬರ ಸಹಾಯಕ್ಕೆ ನೀವು ನೆಚ್ಚಿ ಕುಳಿತುದು ನಿರರ್ಥಕವೆಂಬುದು ನಿಮಗೆ ಗೊತ್ತಾಗುವುದರಲ್ಲಿ ನನಗೆ ಸಂದೇಹವಿಲ್ಲ. ಬಂದ ಸಹಾಯ ವೆಲ್ಲವೂ ಕೂಡ ನಿಮ್ಮಿಂ ದಲೆ. ನೀವು ಯಾವುದಕ್ಕೆ ಪ್ರಯತ್ನಪಟ್ಟರೋ ಅದರ ಪ್ರತಿಫಲಮಾತ್ರ ನಿಮಗೆ ಸಿಕ್ಕಿತು. ಆದರೂ ಕೂಡ ನೀವು ಯಾವಾಗಲೂ ಹೊರಗಿನ ಸಹಾಯಕ್ಕೆ ಕಾದು ಕುಳಿತುದು ಆಶ್ಚರ್ಯ. ಶ್ರೀಮಂತನ ಮನೆ ಅಂಗದಳದಲ್ಲಿ ಜನರು ಯಾವಾಗಲೂ ಕಿಕ್ಕಿರಿದು ನೆರೆದಿರುವರು. ಆದರೆ ಪರೀಕ್ಷೆ ಮಾಡಿದರೆ ಯಾವಾಗಲೂ ಅದೇ ಜನರು ಇರುವುದಿಲ್ಲ. ಬಂದವರು ಶ್ರೀಮಂತನಿಂದ ತಮಗೆ ಏನಾದರೂ ಸಿಕ್ಕುವ ದೆಂದು ಆಶಿಸುವರು. ಆದರೆ ಅವರಿಗೆ ಎಂದಿಗೂ ಸಿಕ್ಕುವುದಿಲ್ಲ. ಆದಕಾರಣ ಎಂದಿಗೂ ಸಿದ್ಧಿಸದ ಫಲದಲ್ಲಿ ಯಾವಾಗಲೂ ನೆಚ್ಚುವುದರಲ್ಲೆ ನಮ್ಮ ಜೀವನ ವೆಲ್ಲ ವ್ಯರ್ಥವಾಗಿದೆ. ನೆಚ್ಚಿಗೆಯನ್ನು ತ್ಯಜಿಸಿ ಎನ್ನುವುದು ವೇದಾಂತ. ನೀವು ಏತಕ್ಕೆ ಆಶಿಸುವುದು. ನಿಮಗೆ ಆಗಲೇ ಸರ್ವವಸ್ತುಗಳೂ ಇವೆ. ಇಲ್ಲ ನೀವೇ ಸರ್ವವಸ್ತುಗಳೂ ಆಗಿರುವಿರಿ. ನೀವು ಯಾವುದಕ್ಕೆ ನೆಚ್ಚುಕೊಂಡಿರುವಿರಿ. ರಾಜ ನೊಬ್ಬನು ಹುಚ್ಚನಾಗಿ ದೇಶದಲ್ಲೆಲ್ಲಾ ರಾಜನನ್ನು ಹುಡುಕಾಡಲು ಅಲೆದಾಡಿ ದರೆ ಅವನಿಗೆ ಎಂದಿಗೂ ಸಿಕ್ಕುವುದಿಲ್ಲ. ಏಕೆಂದರೆ ಅವನೇ ರಾಜನಾಗಿರುವನು. ತನ್ನ ದೇಶದಲ್ಲಿ ಪ್ರತಿಯೊಂದು ಪಟ್ಟಣಕ್ಕೂ ಗ್ರಾಮಕ್ಕೂ ಹೋಗಿ, ಪ್ರತಿಯೊಂದು ಮನೆಯಲ್ಲಿಯೂ ಅಳುತ ಹುಡುಕಬಹುದು. ಆದರೆ ಅವನಿಗೆ ಎಂದಿಗೂ

ಸಿಕ್ಕುವುದಿಲ್ಲ. ಏಕೆಂದರೆ ಅವನೇ ರಾಜನಾಗಿರುವನು. ನಾವೆ ದೇವರೆಂದು ತಿಳಿದು ಈ ಹುಚ್ಚು ಹುಡುಕಾಟವನ್ನು ತೊರೆಯುವುದು ಮೇಲು. ನಾವೆ ದೇವರೆಂದು ತಿಳಿದರೆ ಸಂತೋಷಿಸುತ್ತೇವೆ, ತೃಪ್ತಿಪಡುತ್ತೇವೆ. ಈ ಭ್ರಾಂತಿ ಕಾರ್ಯವೆಲ್ಲವನ್ನು ತೊರೆದು ರಂಗಭೂಮಿಯ ಮೇಲೆ ನಟನು ಆಡುವಂತೆ ಪ್ರಪಂಚ ದಲ್ಲಿ ನಿಮ್ಮ ಪಾಲಿಗೆ ಬಂದುದನ್ನು ನಟಿಸಿ.

ಆಗ ಒಟ್ಟು ನೋಟವೇ ಬದಲಾಯಿಸುವುದು. ಪ್ರಪಂಚ ಒಂದು ನಿತ್ಯ ಸೆರೆಮನೆಯಾಗದೆ ಆಟದ ಮೈದಾನವಾಗುವುದು. ಪರಸ್ಪರ ಪೋಟಾ ಪೋಟಿ ಯಿಲ್ಲದೆ ಅನವರತವೂ ವಸಂತಋತು, ಅರಳಿದ ಅಲರು, ಹಾರುವ ಬಣ್ಣ ಬಣ್ಣದ ಚಿಟ್ಟೆಯಿಂದತುಂಬಿದ ಆನಂದದ ತವರೂರಾಗುವುದು. ಮೊದಲು ಯಾವುದು ನರಕವಾಗಿತ್ತೋ ಅದೇ ಪ್ರಪಂಚವೇ ಸ್ವರ್ಗವಾಗುವುದು. ಬದ್ಧ ಜೀವಿಗಳ ಕಣ್ಣಿಗೆ ಇದು ಒಂದು ನರಕ ಯಾತನೆಯ ಮನೆ. ಆದರೆ ಮುಕ್ತ ಜೀವಿಗಳಿಗೆ ಕಾಣುವುದೇ ಬೇರೆ ಬಗೆ. ಇದೇ ವಿಶ್ವ ಜೀವನ ಸ್ವರ್ಗ ಮುಂತಾದ ಲೋಕಗಳೆಲ್ಲ ಇಲ್ಲೇ ಇದೆ. ಮಾನವನನ್ನು ಹೋಲುವ ದೇವತೆಗಳೆಲ್ಲ ಇಲ್ಲಿರು ವರು. ದೇವತೆಗಳು ತಮ್ಮಂತೆ ಮನುಷ್ಯನನ್ನು ಸೃಷ್ಟಿಸಲಿಲ್ಲ. ಆದರೆ ಮನು ಷ್ಯನು ತನ್ನಂತೆ ದೇವತೆಗಳನ್ನು ಸೃಷ್ಟಿಸಿದನು. ಇಲ್ಲದೆ ದೇವತೆಗಳ ಮೂಲ ರೂಪ. ಇಂದ್ರನಿಲ್ಲಿರುವನು, ವರುಣನಿಲ್ಲಿರುವನು, ಮತ್ತು ವಿಶ್ವದ ಉಳಿದ ದೇವತೆಗಳೆಲ್ಲರೂ ಇಲ್ಲಿರುವರು. ನಮ್ಮನ್ನು ಬಂಧಿಸಿದ ಬೇಡಿಕೆಗಳನ್ನು ಇದು ವರೆಗೂ ನಾವೆ ಕಲ್ಪಿಸಿಕೊಳ್ಳುತ್ತಿದ್ದೆವು. ಈ ದೇವತೆಗಳ ಮೂಲ ರೂಪ ನಾವೆ. ಪೂಜಾಯೋಗ್ಯವಾದ, ಸತ್ಯವಾದ, ಏಕಮಾತ್ರ ದೇವತೆಗಳು ನಾವೆ. ವೇದಾಂತದ ರೀತಿಯೆ ಇದು. ಇದೇ ಅದರ ಕಾರ್ಯಾಕಾರಿತ್ವ. ನಾವು ಸ್ವತಂತ್ರರಾದಮೇಲೆ ಹುಚ್ಚರಂತೆ ಹಿಂದಿನಂತೆ ಅಲೆಯಬೇಕಾಗಿಲ್ಲ. ಸಮಾಜವನ್ನು ನಿರಾಕರಿಸಿ, ಕಾಡಿನಲ್ಲೋ ಗುಹೆಯಲ್ಲೋ ಸಾಯುವುದಕ್ಕೆ ಹೋಗಬೇಕಾಗಿಲ್ಲ. ನಾವು ಎಲ್ಲಿದ್ದೆವೋ ಅಲ್ಲಿಯೇ ಇರುತ್ತೇವೆ. ಆದರೆ ಎಲ್ಲವನ್ನು ಆಮೂಲಾಗ್ರವಾಗಿ ತಿಳಿದುಕೊಳ್ಳುತ್ತೇವೆ. ಈಗಿನ ನೋಟವೇ ಆಗಲೂ ಇರುತ್ತದೆ. ಆದರೆ ಬೇರೆಯ ಅರ್ಥದಿಂದ. ನಮಗೆ ಇನ್ನೂ ಪ್ರಪಂಚದ ರಹಸ್ಯ ಗೊತ್ತಿಲ್ಲ. ಸ್ವತಂ ತ್ರದ ಮೂಲಕ ಮಾತ್ರ ಅದು ಏನೆಂಬುದನ್ನು ನೋಡುತ್ತೇವೆ, ಅದರ ನಿಜತ್ವವನ್ನು ತಿಳಿಯುತ್ತೇವೆ. ನಿಯಮ, ಅದೃಷ್ಟ, ಗ್ರಹಚಾರ ಮುಂತಾದುವು ಗಳೆಲ್ಲ ನಮ್ಮ ಮಹತ್ವದ ಅತ್ಯಲ್ಪವಾಗಿತ್ತೆಂಬುದು ಆಗ ನಮಗೆ ಗೊತ್ತಾಗುತ್ತದೆ. ಇವುಗಳೆಲ್ಲ ಒಂದು ಭಾಗ ಮಾತ್ರ. ಇದೇ ಉಳಿದ ಬೇರೆ ಭಾಗದಲ್ಲಿ ನಿತ್ಯ

ಸ್ವಾತಂತ್ರ್ಯವಿತ್ತು. ನಮಗೆ ಇದು ಗೊತ್ತಿರಲಿಲ್ಲ. ಅದಕ್ಕೋಸ್ಕರವಾಗಿಯೇ ನಾವು ಪಾಪದಿಂದ ತಪ್ಪಿಸಿಕೊಳ್ಳಬೇಕೆಂದು, ಬೇಟೆಯವರಿಂದ ಅಟ್ಟಿಸಿಕೊಂಡು ಬಂದ ಮೊಲ ಮರಳಿನಲ್ಲಿ ತನ್ನ ಮುಖವನ್ನು ಮುಚ್ಚಿಕೊಳ್ಳುವಂತೆ ಮಾಡುತ್ತಿದ್ದೆವು. ಮೋಹದಿಂದ ನಾವು ನಮ್ಮ ನೈಜಸ್ಥಿತಿಯನ್ನು ಮರೆಯುವುದಕ್ಕೆ ಪ್ರಯತ್ನಿಸುತ್ತಿದ್ದೆವು. ಆದರೂ ಅದು ಸಾಧ್ಯವಾಗಲಿಲ್ಲ. ಅದು ಯಾವಾಗಲೂ ನಮ್ಮನ್ನು ಕರೆಯುತ್ತಿತ್ತು. ದೇವದೇವತೆಗಳನ್ನು ಹುಡುಕುವುದು, ಹೊರಗಿನ ಪ್ರಪಂಚದಲ್ಲಿ ಸ್ವತಂತ್ರರಾಗಲು ಯತ್ನಿಸುವುದು, ಇವುಗಳೆಲ್ಲ ನಮ್ಮ ನೈಜಸ್ಥಿತಿಯ ಅರಸುವಿಕೆ. ನಮಗೆ ಕೇಳುತ್ತಿದ್ದ ಧ್ವನಿಯನ್ನು ತಪ್ಪು ಭಾವಿಸಿಕೊಂಡೆವು. ಅದು ಬೆಂಕಿಯಿಂದ ಅಥವಾ ದೇವರಿಂದ, ಸೂರ್ಯ ಚಂದ್ರ ನಕ್ಷತ್ರಾವಳಿಗಳಿಂದ ಬಂದಿತೆಂದು ನಾವು ಆಲೋಚಿಸಿದೆವು. ಆದರೆ ಕೊನೆಗೆ ಅದು ನಮ್ಮ ಅಂತರಂಗದಿಂದಲೇ ಬಂದಿತೆಂದು ಗೊತ್ತಾಗಿದೆ. ನಿತ್ಯಸ್ವಾತಂತ್ರ್ಯವನ್ನು ಬೋಧಿಸುತ್ತಿರುವ ಈ ಶಾಶ್ವತ ಧ್ವನಿ ನಮ್ಮ ಹೃದಯಾಂತರಾಳದಲ್ಲಿದೆ. ಅನವರತರವೂ ಇದರ ಗಾನವಾಗುತ್ತಿದೆ. ಈ ಆತ್ಮಗಾನದ ಒಂದು ಅಂಶವೇ ಪೃಥ್ವಿಯಾಗಿರುವುದು, ನಿಯಮವಾಗಿರುವುದು, ವಿಶ್ವವಾಗಿರುವುದು. ಆದರೆ ಇದು ಯಾವಾಗಲೂ ನಮ್ಮದಾಗಿತ್ತು, ಮತ್ತು ನಮ್ಮದಾಗಿಯೇ ಇರುವುದು. ಒಂದು ಮಾತಿನಲ್ಲಿ ಹೇಳುವುದಾದರೆ, ವೇದಾಂತದ ಆದರ್ಶವೇ, ಮಾನವನ ನೈಜಸ್ಥಿತಿಯನ್ನು ಅರಿಯುವುದು. ನಿನ್ನ ಕಣ್ಣೆದುರಿಗೆ ಇರುವ ದೇವರಾದ ಸಹೋದರಮಾನವನನ್ನೇ ನೀನು ಪೂಜಿಸಲು ಆಗದೆ ಇದ್ದರೆ, ಅವ್ಯಕ್ತನಾದ ದೇವರನ್ನು ನೀನು ಹೇಗೆ ಪೂಜಿಸಬಲ್ಲೆ ಎಂಬುದೇ ವೇದಾಂತದ ಸಂದೇಶ.

ಬೈಬಲ್ಲು ಏನು ಹೇಳುವುದು ನಿಮಗೆ ಗೊತ್ತಿಲ್ಲವೆ? "ನೀನು ನೋಡಿದ ಸಹೋದರನನ್ನೇ ಪ್ರೀತಿಸಲಾಗದೆ ಇದ್ದರೆ, ನೋಡದ ದೇವರನ್ನು ಹೇಗೆ ಪ್ರೀತಿಸಬಲ್ಲೆ?" ಮಾನವನಲ್ಲಿ ನೀನು ದೇವರನ್ನು ಕಾಣದೇ ಇದ್ದರೆ, ಎಲ್ಲೊ ಮೋಡಗಳ ಮಧ್ಯದಲ್ಲಿ, ಜಡವಾದ ಅಚೇತನವಾದ ವಸ್ತುವಿನಿಂದ ಮಾಡಿದ ವಿಗ್ರಹದಲ್ಲಿ ಅಥವಾ ನಿನ್ನ ಕಾಲ್ಪನಿಕ ಪುರಾಣಗಳಲ್ಲಿ ಹೇಗೆ ನೋಡಬಲ್ಲೆ? ಪುರುಷರಲ್ಲಿ ಮತ್ತು ಸ್ತ್ರೀಯರಲ್ಲಿ ದೇವರನ್ನು ನೀವು ನೋಡಲು ಮೊದಲು ಮಾಡಿದ ದಿನದಿಂದ ನಿಮ್ಮನ್ನು ಧನ್ಯಾತ್ಮರೆಂದು ಕರೆಯುತ್ತೇನೆ. ಬಲದ ಕೆನ್ನೆಗೆ ಹೊಡೆದರೆ ಎಡದ ಕೆನ್ನೆಯನ್ನು ತೋರಿಸು ಎಂದರೆ ಏನೆಂಬುದು ಆಗ ನಿಮಗೆ ಗೊತ್ತಾಗುವುದು. ನೀವು ಎಂದು ಮಾನವನನ್ನು ದೇವರಂತೆ ಕಾಣುತ್ತೀರೊ, ಅಂದಿನಿಂದ ಎಲ್ಲವನ್ನು ದುಷ್ಟ ವ್ಯಾಘ್ರವನ್ನು ಕೂಡ ಪ್ರೇಮದಿಂದ ಬರಮಾಡಿಕೊಳ್ಳುತ್ತೀರಿ. ನಿಮಗೆ

ಏನು ಪ್ರಾಪ್ತವಾದರೂ, ಅದೆಲ್ಲವೂ ನಿತ್ಯಾನಂದಮಯನಾದ ಭಗವಂತನೆ. ಆತನೆ ನಮಗೆ ನಾನಾ ರೂಪಿನಲ್ಲಿ, ತಂದೆಯಂತೆ, ತಾಯಿಯಂತೆ, ಸ್ನೇಹಿತನಂತೆ, ಮಗುವಿನಂತೆ, ಕಾಣಿಸಿಕೊಳ್ಳುತ್ತಿರುವನು. ನಮ್ಮೊಂದಿಗೆ ಆಟವಾಡುತ್ತಿರುವ ನಮ್ಮಾತ್ಮನೇ ಅವನು.

ಹೇಗೆ ಮಾನವರೊಂದಿಗೆ ಇರುವ ನಮ್ಮ ಸಂಬಂಧವನ್ನು ಪವಿತ್ರವಾಗಿ ಮಾಡಬಹುದೊ, ಅದರಂತೆಯೇ ದೇವರೊಂದಿಗೆ ನಮಗೆ ಇರುವ ಸಂಬಂಧವು ಯಾವುದಾದರೊಂದು ಮಾನವಿಕ ಸಂಬಂಧವನ್ನು ಧರಿಸಬಹುದು. ದೇವರನ್ನು ನಾವು ನಮ್ಮ ತಾಯಿ, ತಂದೆ, ಸ್ನೇಹಿತ ಪ್ರಿಯತಮ ಮುಂತಾದ ದೃಷ್ಟಿಯಿಂದ ನೋಡಬಹುದು. ದೇವರನ್ನು ತಾಯಿಯೆಂದು ಕೂಗುವುದು ತಂದೆಯೆಂದು ಕೂಗುವುದಕ್ಕಿಂತ ಮೇಲಾದುದು. ಇದಕ್ಕಿಂತ ಸ್ನೇಹಿತನೆಂದು ಕೂಗುವುದು ಮತ್ತೂ ಮೇಲಾದುದು. ಸರ್ವೋತ್ತಮವಾದುದೆ ಪ್ರಿಯತಮನೆಂಬುದು. ಇವುಗಳ ಪರಮಾವಧಿಯೆ ಪ್ರಿಯ ಪ್ರೇಯಸಿಯಲ್ಲಿ ಭಿನ್ನತೆಯನ್ನು ನೋಡದೆ ಇರುವುದು. ಒಬ್ಬ ಪ್ರಿಯನು ಬಂದು ತನ್ನ ಪ್ರೇಯಸಿ ಇರುವ ಬಾಗಿಲನ್ನು ತಟ್ಟಿದ ಒಂದು ಪರ್ಷಿಯ ದೇಶದ ಹಳೆಯ ಕಥೆ ಬಹುಶಃ ನಿಮಗೆ ಜ್ಞಾಪಕವಿರಬಹುದು. ಪ್ರೇಯಸಿ ನೀನಾರೆಂದು ಪ್ರಶ್ನೆಮಾಡಿದಳು. ಅದಕ್ಕೆ ನಾನು ಎಂದು ಉತ್ತರಕೊಟ್ಟನು. ಪ್ರತ್ಯುತ್ತರ ಬರಲಿಲ್ಲ. ಎರಡನೆಯ ಸಲಿ ಪ್ರಿಯನು "ನಾನು ಇಲ್ಲಿರುವುದು" ಎಂದು ಹೇಳಿದನು. ಆದರೂ ಬಾಗಿಲು ತೆರೆಯಲಿಲ್ಲ. ಮೂರನೆಸಲಿ ಅವನು ಬಂದನು. ಒಳಗಿನಿಂದ ಧ್ವನಿಯು "ಯಾರವರು?" ಎಂದು ಪ್ರಶ್ನೆ ಮಾಡಿತು. ಆತನು "ನಾನೆ ನೀನು ಎನ್ನ ಪ್ರಿಯತಮಳೆ" ಎಂದು ಉತ್ತರ ಕೊಟ್ಟನು. ಆಗ ಬಾಗಿಲು ತೆರೆಯಿತು. ಇದರಂತೆಯೇ ದೇವರಿಗೂ ನಮಗೂ ಇರುವ ಸಂಬಂಧವೂ ಕೂಡ. ಸಮಸ್ತದಲ್ಲಿಯೂ ಆತನು ಇರುವನು. ಆತನೇ ಸಮಸ್ತವೂ ಕೂಡ. ಪ್ರತಿಯೊಬ್ಬ ಪುರುಷರೂ ಸ್ತ್ರೀಯರೂ ಕೂಡ, ಪ್ರತ್ಯಕ್ಷನಾದ ಆನಂದಮಯನಾದ, ಸಚೇತನ ದೇವರು. ದೇವರು ಅಜ್ಞಾತನೆಂದು ಹೇಳುವವರು ಯಾರು? ಆತನನ್ನು ಹುಡುಕಬೇಕೆಂದು ಹೇಳುವವರು ಯಾರು? ಶಾಶ್ವತವಾದ ದೇವರನ್ನು ನಾವು ನೋಡಿರುವೆವು. ಶಾಶ್ವತವಾಗಿಯೂ ನಾನು ಅವನಲ್ಲಿ ವಾಸಿಸುತ್ತಿರುವೆನು. ಎಲ್ಲೆಡೆಯಲ್ಲಿಯೂ ಆತನು ನಿತ್ಯ ಪರಿಚಿತನು. ನಿತ್ಯ ಪೂಜಿತನು.

ನಂತರ ಮಿಕ್ಕ ಪೂಜಾವಿಧಾನಗಳು ತಪ್ಪಲ್ಲವೆಂಬ ಮತ್ತೊಂದು ಭಾವನೆ ಬರುವುದು. ನಾವು ಜ್ಞಾಪಕದಲ್ಲಿಟ್ಟುಕೊಳ್ಳಬೇಕಾದ ಬಹಳ ಮುಖ್ಯವಾದ ಒಂದು

ಅಂಶ. ಅದೇ ಬಾಹ್ಯಾಚಾರದ ಮೂಲಕ ಎಷ್ಟೇ ಒರಟಾದ ವಿಗ್ರಹದ ಮೂಲಕ ದೇವರನ್ನು ಪೂಜಿಸುವವರು ಅವರು ಎಂದು ತಿಳಿದರೂ, ಅವರು ತಪ್ಪು ಮಾರ್ಗದಲ್ಲಿ ಇಲ್ಲವೆನ್ನುವುದು. ಸತ್ಯದಿಂದ ಸತ್ಯದೆಡೆಗೆ ಪ್ರಯಾಣ ಇದು. ಸಣ್ಣ ಸತ್ಯದಿಂದ ದೊಡ್ಡ ಸತ್ಯದೆಡೆಗೆ ಪ್ರಯಾಣ. ಕತ್ತಲೆ ಎಂದರೆ ಕಡಿಮೆ ಬೆಳಕು. ಪಾಪವೆಂದರೆ ಕಡಿಮೆ ಪುಣ್ಯ. ಮಲಿನತೆ ಎಂದರೆ ಕಡಿಮೆ ಪಾವನತೆ. ಇನ್ನೊಬ್ಬರನ್ನು ಯಾವಾಗಲೂ ನಾವು ಬಂದ ದಾರಿಯಲ್ಲೇ ಅವರೂ ನಡೆಯುತ್ತಿರುವರು ಎಂಬ ಸಹಾನುಭೂತಿಯಿಂದ ಪ್ರೇಮದಿಂದ ನೋಡಬೇಕೆನ್ನುವುದನ್ನು ನಾವು ಯಾವಾಗಲೂ ಜ್ಞಾಪಕದಲ್ಲಿಟ್ಟಿರಬೇಕು. ನೀನೀಗ ಮುಕ್ತನಾದರೆ, ಎಲ್ಲರೂ ಈಗಲೋ ಸ್ವಲ್ಪ ತಡವಾಗಿಯೊ ಮುಕ್ತರಾಗುವರೆಂಬುದನ್ನು ತಿಳಿಯಬೇಕು. ನೀನು ಮುಕ್ತನಾದರೆ ಅಪೂರ್ಣತೆಯನ್ನು ಹೇಗೆ ಕಾಣುವೆ? ನೀನು ನಿಜವಾಗಿಯೂ ಪರಿಶುದ್ಧನಾಗಿದ್ದರೆ ಹೊರಗೆ ಕಳಂಕವನ್ನು ಹೇಗೆ ನೋಡುವೆ? ಏಕೆಂದರೆ ಯಾವುದು ಅಂತರಂಗದಲ್ಲಿದೆಯೋ ಅದೇ ಬಾಹ್ಯದಲ್ಲಿದೆ, ನಮ್ಮಲ್ಲಿ ಮಲಿನತೆಯಿಲ್ಲದೆ ಹೊರಗೆ ಮಲಿನತೆಯನ್ನು ನೋಡಲಾರೆವು. ಇದು ವೇದಾಂತದ ಒಂದು ಅನುಷ್ಠಾನ ಭಾಗ. ನಮ್ಮ ಜೀವನದಲ್ಲಿ ಇವನ್ನು ಅಭ್ಯಾಸ ಮಾಡುವುದಕ್ಕೆ ಪ್ರಯತ್ನಿಸುತ್ತೇವೆ ಎಂದು ತಿಳಿಯುತ್ತೇನೆ. ಇವುಗಳನ್ನು ಅನುಷ್ಠಾನಕ್ಕೆ ತರುವುದೇ ನಮ್ಮ ಜೀವನದ ಗುರಿ. ನಮಗೆ ಇದರಿಂದ ಆಗುವ ದೊಡ್ಡ ಪ್ರಯೋಜನವೇನೆಂದರೆ, ಅತೃಪ್ತಿ ಅಶಾಂತಿಗಳಿಲ್ಲದೆ ಶಾಂತಿಯಿಂದ ತೃಪ್ತಿಯಿಂದ ಕೆಲಸ ಮಾಡುತ್ತೇವೆ. ಏಕೆಂದರೆ ಸತ್ಯ ನಮ್ಮಲ್ಲಿದೆ ಎಂಬುದು ನಮಗೆ ಗೊತ್ತು. ಅದು ನಮ್ಮ ಆಜನ್ಮಸಿದ್ಧ ಹಕ್ಕಾಗಿದೆ. ಅವನ್ನು ನಾವು ಪ್ರಕಾಶಕ್ಕೆ ತರಬೇಕಾಗಿದೆ, ಅವನ್ನು ವ್ಯಕ್ತಮಾಡಬೇಕಾಗಿದೆ.



## ಅಧ್ಯಾಯ ೩

ಛಾಂದೋಗ್ಯ ಉಪನಿಷತ್ತಿನಲ್ಲಿ ನಾರದ ಋಷಿ ಸನತ್ಕುಮಾರನ ಬಳಿಗೆ ಹೋಗಿ ಅನೇಕ ಪ್ರಶ್ನೆ ಕೇಳಿದನೆಂಬುದನ್ನು ಓದುತ್ತೇವೆ. ಅವುಗಳಲ್ಲಿ ಒಂದು ಪ್ರಶ್ನೆ ಪ್ರಪಂಚದ ನೆಲೆಗೆ ಧರ್ಮವೇ ಕಾರಣ ಎನ್ನುವುದು. ಸನತ್ಕುಮಾರನು ಆತನಿಗೆ ಪ್ರಪಂಚಕ್ಕಿಂತ ಮೇಲಾದುದು ಮತ್ತೊಂದಿದೆ, ಅದಕ್ಕಿಂತ ಮೇಲಾದುದು ಮತ್ತೊಂದಿದೆ ಎಂದು ಹೇಳಿ ಅವನನ್ನು ಮೆಟ್ಟಲು ಮೆಟ್ಟಲಾಗಿ ಆಕಾಶ ತತ್ತ್ವದ ಪರಿಯಂತರವೂ ಕರೆದುಕೊಂಡು ಬರುವನು. ಆಕಾಶ ಜ್ಯೋತಿಗಿಂತ ಮೇಲಾದುದು. ಏಕೆಂದರೆ ಸೂರ್ಯ ಚಂದ್ರ ನಕ್ಷತ್ರಾವಳಿಗಳು, ಮಿಂಚು ಇವೆಲ್ಲ ಇರುವುದು ಆಕಾಶದಲ್ಲಿ. ನಾವು ವಾಸಮಾಡುವುದು ಆಕಾಶದಲ್ಲಿ. ಸಾಯುವುದು ಆಕಾಶದಲ್ಲಿ. ಆಗ ಅದಕ್ಕಿಂತ ಮೇಲಾದುದು ಏನಾದರೂ ಇದೆಯೆ ಎಂದು ಪ್ರಶ್ನೆ ಏಳುತ್ತದೆ. ಆಗ ಸನತ್ಕುಮಾರನು ಪ್ರಾಣವೆಂದು ಹೇಳುತ್ತಾನೆ. ವೇದಾಂತ ದೃಷ್ಟಿಯಿಂದ ಪ್ರಾಣವೇ ಜೀವನದಲ್ಲಿ ಅತಿ ಮುಖ್ಯವಾದುದು. ಇದು ಆಕಾಶದಂತೆ ಒಂದು ಸರ್ವವ್ಯಾಪಿಯಾದ ತತ್ತ್ವ. ದೇಹದಲ್ಲಿಯಾಗಲೀ ಅಥವಾ ಇನ್ನು ಎಲ್ಲಿಯಾದರೂ ಆಗಲೀ, ಎಲ್ಲಾ ಚಲನೆಯೂ ಪ್ರಾಣದ ಕೆಲಸ. ಇದು ಆಕಾಶಕ್ಕಿಂತ ಮೇಲಾದುದು. ಇದರ ಮೂಲಕ ಎಲ್ಲವೂ ಜೀವಿಸುತ್ತದೆ. ಪ್ರಾಣ ತಾಯಿಯಲ್ಲಿದೆ, ತಂದೆಯಲ್ಲಿದೆ, ಅಕ್ಕತಂಗಿಯರಲ್ಲಿದೆ.

ಶ್ವೇತಕೇತು ತನ್ನ ತಂದೆಯನ್ನು ಸತ್ಯದ ವಿಚಾರವಾಗಿ ಕೇಳಿದ ಮತ್ತೊಂದು ಸಂಗತಿಯನ್ನು ಓದುತ್ತೇನೆ. ತಂದೆಯು ಆತನಿಗೆ ಬೇರೆಬೇರೆ ವಿಷಯಗಳನ್ನು ಹೇಳಿ, "ಇವುಗಳಲ್ಲೆಲ್ಲ ಯಾವುದು ಸೂಕ್ಷ್ಮ ಕಾರಣವೊ, ಯಾವುದರಿಂದ ಇವೆಲ್ಲ ಆಗಿದೆಯೊ, ಅದೇ ಸರ್ವ, ಅದೇ ಸತ್ಯ! ಓ ಶ್ವೇತಕೇತು ನೀನೆ ಅದು" ಎಂದು ಹೇಳಿ ಪೂರೈಸಿರುವನು. ನಂತರ ಅನೇಕ ಉದಾಹರಣೆಗಳನ್ನು ಹೇಳುವನು. "ಓ ಶ್ವೇತಕೇತು, ದುಂಬಿಯು ಮಕರಂದವನ್ನು ಬೇರೆ ಬೇರೆ ಹೂವುಗಳಿಂದ ತಂದು ಕೂಡಿಡುವಂತೆ, ಮಧುವಿಗೆ ತಾನು ಬೇರೆ ಬೇರೆ ಮರದಿಂದ, ಬೇರೆ ಬೇರೆ ಹೂವುಗಳಿಂದ ಬಂದಿರುವುದು ತಿಳಿಯದೆ ಇರುವಂತೆ, ನಾವು ಕೂಡ ಅಂತಹ ಸ್ಥಿತಿಗೆ ಬಂದಮೇಲೆ ನಾವು ಹೇಗೆ ಬಂದೆವೆಂಬುದು ನಮಗೆ ತಿಳಿಯದು. ಯಾವುದು ಅಂತಹ ಸೂಕ್ಷ್ಮದ ಸಾರವೊ, ಅದೇ ಪ್ರತಿಯೊಂದು ವಸ್ತುವಿನ ಆತ್ಮ. ಅದೇ ಸತ್ಯ, ಅದೇ ಆತ್ಮ. ಓ ಶ್ವೇತಕೇತು ನೀನೇ ಅದು." ನದಿಗಳು ಸಮುದ್ರಕ್ಕೆ ಹರಿದು ಹೋಗುವ ಮತ್ತೊಂದು ಉದಾಹರಣೆಯನ್ನು ಕೊಡುವನು. "ಸಾಗರ

ದಲ್ಲಿದ್ದಾಗ, ನದಿಗಳೆಲ್ಲ, ನಾವು ಬೇರೆ ಬೇರೆ ನದಿಗಳಾಗಿದ್ದೆವು ಎಂದು ಹೇಗೆ ತಿಳಿಯವೊ, ಅದರಂತೆಯೇ ನಾವುಗಳೂ ಕೂಡ ಅಂತಹ ಸತ್ಯದಿಂದ ಬಂದಮೇಲೆ ನಾವುಗಳೂ ಅದೆ ಎಂಬುದು ನಮಗೆ ತಿಳಿಯದು, ಓ, ಶ್ವೇತಕೇತು ನೀನೆ ಅದು.'' ಹೀಗೆ ಅವನ ಉಪದೇಶ ಮುಂದೆ ಸಾಗುವುದು

ಜ್ಞಾನದ ಎರಡು ನಿಯಮಗಳಿವೆ. ಮೊದಲನೆಯದು ಪ್ರತ್ಯೇಕವಾದುದನ್ನು ಸಾಧಾರಣವಾದುದಕ್ಕೆ ಹೋಲಿಸಿ, ನಂತರ ಸಾಧಾರಣವಾದುದನ್ನು ಸರ್ವಸಾಧಾರಣವಾದುದಕ್ಕೆ ಹೋಲಿಸುವುದರ ಮೂಲಕ ತಿಳಿಯುವೆವು. ಎರಡನೆಯ ನಿಯಮವೆ, ವಿವರಣೆ ಯಾವ ವಸ್ತುವಿಗೆ ಬೇಕೋ ಅದನ್ನು ಸಾಧ್ಯವಾದ ಮಟ್ಟಿಗೆ ವಸ್ತುವಿನ ಸ್ವಭಾವದ ಮೂಲಕವೆ ವಿವರಿಸಬೇಕು. ಮೊದಲನೆಯ ನಿಯಮವನ್ನು ತೆಗೆದುಕೊಂಡರೆ, ನಮ್ಮ ಜ್ಞಾನವೆಲ್ಲ ಹೆಚ್ಚು ಹೆಚ್ಚು ವರ್ಗೀಕರಣದಲ್ಲಿದೆ (Classification) ಎಂಬುದನ್ನು ನೋಡುತ್ತೇವೆ. ಯಾವಾಗಲಾದರೂ ಏನಾದರೂ ಒಂಟಿಯಾಗಿ ನಡೆದರೆ ನಮಗೆ ಅಸಮಾಧಾನ. ಆ ಸಂಗತಿಯು ಮತ್ತೆ ಮತ್ತೆ ಆಗುತ್ತದೆ ಎಂಬುದನ್ನು ತೋರಿದಾಗ ನಮಗೆ ತೃಪ್ತಿಯಾಗಿ ಅದನ್ನು ಒಂದು ನಿಯಮ (law) ಎಂದು ಕರೆಯುತ್ತೇವೆ. ಒಂದು ಸೇಬಿನ ಹಣ್ಣು ಕೆಳಗೆ ಬೀಳುವುದನ್ನು ನೋಡಿದಾಗ ನಮಗೆ ಅತೃಪ್ತಿಯಾಗುವುದು. ಆದರೆ ಎಲ್ಲಾ ಸೇಬಿನ ಹಣ್ಣುಗಳೂ ಬೀಳುವುದನ್ನು ನೋಡಿದಾಗ ತೃಪ್ತಿಯಾಗಿ ಅದನ್ನು ಆಕರ್ಷಣ ಶಕ್ತಿಯ ನಿಯಮವೆಂದು ಹೇಳುತ್ತೇವೆ. ವಸ್ತುಸ್ಥಿತಿಯೇನೆಂದರೆ ನಾವು ವ್ಯಷ್ಟಿಯಿಂದ ಸಮಷ್ಟಿಯನ್ನು ಊಹಿಸುತ್ತೇವೆ.

ನಾವು ಧಾರ್ಮಿಕ ವಿಷಯಗಳನ್ನು ವಿಚಾರ ಮಾಡುವಾಗ ಈ ವೈಜ್ಞಾನಿಕ ರೀತಿಯನ್ನು ಉಪಯೋಗಿಸಬೇಕು. ಅದೇ ನಿಯಮವೇ ಇಲ್ಲಿಯೂ ಕೂಡ ಸರಿ ಹೋಗುತ್ತದೆ. ನಿಜವಾಗಿಯೂ ಇದೇ ನಿಯಮವನ್ನೇ ಇಂದಿನವರೆವಿಗೂ ನಾವು ಅನುಸರಿಸುವುದು. ನಿಮಗೆ ಭಾಷಾಂತರಮಾಡಿ ಹೇಳುತ್ತಿರುವ ಪುಸ್ತಕಗಳನ್ನು ಓದುವುದರಿಂದ ನಮಗೆ ದೊರಕುವ ಬಹಳ ಪುರಾತನ ಭಾವವೆಂದರೆ ವ್ಯಷ್ಟಿಯಿಂದ ಸಮಷ್ಟಿಗೆ ಹೋಗುವ ನಿಯಮ. ದೇವತೆಗಳು ಹೇಗೆ ಒಂದು ಸಾಮಾನ್ಯ ನಿಯಮದಲ್ಲಿ ಐಕ್ಯರಾದರೆಂಬುದನ್ನು ನಾವು ನೋಡಿದೆವು. ಅದರಂತೆಯೇ ಸೃಷ್ಟಿಯ ಭಾವನೆಯಲ್ಲಿ ಕೂಡ ಆ ಪುರಾತನ ತತ್ತ್ವಜ್ಞಾನಿಗಳು ಮೇಲೆ ಮೇಲೆ ಹೋಗುತ್ತಿರುವುದನ್ನು ನಾವು ನೋಡಿದೆವು. ಸೂಕ್ಷ್ಮವಸ್ತುವಿನಿಂದ ಸೂಕ್ಷ್ಮತರ ವಸ್ತುವಿಗೆ ಹೋಗುತ್ತಾರೆ. ಅಲ್ಲಿಂದ ಮತ್ತೂ ಸೂಕ್ಷ್ಮತರ ಸರ್ವಸಾಮಾನ್ಯವಾದ ವಸ್ತುವಿಗೆ ಹೋಗುತ್ತಾರೆ. ... ಸೃಷ್ಟಿಗಳಿಂದ ಸರ್ವ

ವ್ಯಾಪಿಯಾದ ಆಕಾಶಕ್ಕೂ ಬರುತ್ತಾರೆ. ಅಲ್ಲಿಂದಲೂ ಕೂಡ ಅವರು ಸರ್ವವ್ಯಾಪಿಯಾದ ಶಕ್ತಿ ಅಥವಾ ಆಕಾಶಕ್ಕೆ ಹೋಗುತ್ತಾರೆ. ಇವುಗಳೆಲ್ಲದರ ಅಂತರಾಳದಲ್ಲಿ ಕೂಡ ಒಂದು ಮತ್ತೊಂದರಿಂದ ಬೇರೆಯಲ್ಲವೆಂಬ ನಿಯಮವು ಹರಿಯುತ್ತಿರುವುದು. ಆಕಾಶವೆ ಸೂಕ್ಷ್ಮತರ ಪ್ರಾಣವಾಗಿರುವುದು, ಅಥವಾ ಸೂಕ್ಷ್ಮತರ ಪ್ರಾಣವೆ ಸ್ಥೂಲವಾಗಿ ಆಕಾಶವಾಗುವುದು. ಆಕಾಶ ಮತ್ತೂ ಸ್ಥೂಲವಾಗುವುದು ಹೇಗೆ.

ಸಾಕಾರ ದೇವರನ್ನು ಸಾಮಾನ್ಯ ವಿಧಾನಕ್ಕೆತರುವ ಮತ್ತೊಂದು ವಿಚಾರವಿದೆ. ಈ ಸಾಮಾನ್ಯ ವಿಧಾನವನ್ನು ಅವರು ಹೇಗೆ ಸೇರಿದರು ಎಂಬುದನ್ನು ನಾವು ನೋಡಿರುವೆವು. ಅದನ್ನು ನಮ್ಮ ಪ್ರಜ್ಞೆಗಳೆಲ್ಲದರ ಮೊತ್ತವೆಂದು ಕರೆದರು. ಆದರೆ ಇಲ್ಲಿ ಒಂದು ಕಷ್ಟ ತಲೆದೋರುತ್ತದೆ. ಈ ಸಾಮಾನ್ಯ ವಿಧಾನಕ್ಕೆ ತರುವುದು ಅಸಂಪೂರ್ಣವಾಗಿದೆ. ಪ್ರಕೃತಿಯ ಅರ್ಧಭಾಗವಾದ ಪ್ರಜ್ಞೆಯನ್ನು ಮಾತ್ರ ತೆಗೆದುಕೊಂಡು ಅದರಲ್ಲಿ ಸರ್ವಸಾಮಾನ್ಯ ನಿಯಮವನ್ನು ಹುಡುಕಿ ಉಳಿದ ಅರ್ಧವನ್ನು ಗಮನಕ್ಕೇ ತರುವುದಿಲ್ಲ. ಆದಕಾರಣ ಇದು ಮೊದಲನೆಯದಾಗಿ ಅಸಂಪೂರ್ಣ ಸಾಮಾನ್ಯ ವಿಧಾನಕ್ಕೆ ತರುವಿಕೆ. ಅದರಲ್ಲಿ ಮತ್ತೊಂದು ಕುಂದಿದೆ. ಅದೇ ಎರಡನೆಯ ನಿಯಮಕ್ಕೆ ಸಂಬಂಧಪಟ್ಟದ್ದು. ಪ್ರತಿಯೊಂದು ವಸ್ತುವನ್ನು ಅದರ ಸ್ವಭಾವದ ಮೂಲಕವಾಗಿಯೆ ವಿವರಿಸಬೇಕು. ನೆಲದಮೇಲೆ ಬಿದ್ದ ಸೇಬಿನ ಹಣ್ಣನ್ನು ಯಾವುದೋ ಒಂದು ಭೂತ ನೆಲಕ್ಕೆ ಸೆಳೆಯಿತೆಂದು ನಂಬಿದ ಕೆಲವರಿರಬಹುದು. ಆದರೆ ಆಕರ್ಷಣ ಶಕ್ತಿಯ ನಿಯಮವೆ ಇದಕ್ಕೆ ವಿವರಣೆ. ಇದು ಅಷ್ಟೊಂದು ತೃಪ್ತಿದಾಯಕವಾದ ವಿವರಣೆ ಅಲ್ಲವೆಂದು ಗೊತ್ತಿದ್ದರೂ ಕೂಡ ಇದು ಮೊದಲನೆಯ ವಿವರಣೆಗಿಂತಲೂ ಎಷ್ಟೋ ಮೇಲು. ಏಕೆಂದರೆ ಇದು ವಸ್ತುವಿನ ಸ್ವಭಾವದಿಂದಲೇ ಬಂದಿರುವುದು. ಮೊದಲನೆಯ ವಿವರಣೆಯಲ್ಲಿ ಒಂದು ಬಾಹ್ಯ ಕಾರಣವನ್ನು ಊಹಿಸುತ್ತಾರೆ. , ಆದಕಾರಣ ನಮ್ಮ ಅನುಭವದ ಎಲ್ಲೆಯೊಳಗೆ, ವಸ್ತುವಿನ ಸ್ವಭಾವದ ಮೇಲೆ ನಿಂತ ವಿವರಣೆಯು ವೈಜ್ಞಾನಿಕವಾದುದು. ಯಾವ ವಿವರಣೆ ಬಾಹ್ಯ ವಸ್ತುವಿನ ಸಹಕಾರವನ್ನು ತೋರುವುದೋ, ಅದು ವೈಜ್ಞಾನಿಕವಾದುದಲ್ಲ.

ಆದಕಾರಣ ಸೃಷ್ಟಿಕರ್ತನಾದ ಸಾಕಾರ ದೇವರ ವಿವರಣೆ ಆ ಪರೀಕ್ಷೆಯಲ್ಲಿ ತೇರ್ಗಡೆಯಾಗಬೇಕು. ಆ ದೇವರಿಗೆ ಏನಾದರೂ ಪ್ರಕೃತಿಯೊಂದಿಗೆ ಯಾವ ಸಂಬಂಧವೂ ಇಲ್ಲದೆ, ಅವನು ಪ್ರಕೃತಿಯ ಹೊರಗೆ ಇದ್ದರೆ, ಆತನ ಆಜ್ಞೆಯಂತೆ ಶೂನ್ಯದಿಂದ ಈ ಸೃಷ್ಟಿ ಬಂದರೆ, ಇದು ವೈಜ್ಞಾನಿಕವಾದ ವಿವರಣೆಯಾಗುವು

ದಿಲ್ಲ. ಅನೇಕ ಕಾಲದಿಂದಲೂ, ದೇವರಲ್ಲಿ ನಂಬಿದ ಪ್ರತಿಯೊಂದು ಧರ್ಮದ ಕುಂದು ಇದು. ಏಕ ದೇವವಾದ ಅಥವಾ ಸಗುಣ ಬ್ರಹ್ಮವಾದವೆಂದು ಯಾವುದನ್ನು ಕರೆಯುತ್ತಾರೆಯೋ, ಅದರಲ್ಲಿ ಈ ಎರಡು ಕೊರತೆಗಳು ಕಾಣುತ್ತವೆ. ಸಾಕಾರ ದೇವರಲ್ಲಿ ಮಾನವನಲ್ಲಿರುವ ಸುಗುಣಗಳನ್ನೆಲ್ಲ ಅಧಿಕವಾಗಿ ಗುಣಾಕಾರ ಮಾಡಿದಂತೆ ಇದೆ. ತನ್ನ ಇಚ್ಛೆಯ ಪ್ರಕಾರ ವಿಶ್ವವನ್ನು ಶೂನ್ಯ ಧಿಂದ ಸೃಷ್ಟಿಸಿದನು. ಆದರೂ ಆತನು ಅದರಿಂದ ಬೇರೆಯಾಗಿರುವನು. ಇದು ನಮ್ಮನ್ನು ಎರಡು ಕಷ್ಟಗಳಿಗೆ ಗುರಿ ಮಾಡುತ್ತದೆ.

ನಮಗೆ ಕಂಡಂತೆ ಇದು ಸವಿಸ್ತಾರವಾಗಿ ಸಾಮಾನ್ಯ ನಿಯಮಕ್ಕೆ ತರುವ ನಿಯಮವಲ್ಲ. ಎರಡನೆಯದಾಗಿ ಇದು ಪ್ರಕೃತಿಯಿಂದ ಪ್ರಕೃತಿಯ ವಿವರಣೆಯಲ್ಲ. ಕಾರ್ಯ, ಕಾರಣವಲ್ಲ. ಕಾರಣ, ಕಾರ್ಯದಿಂದ ಸಂಪೂರ್ಣ ಬೇರೆ ಎಂದು ಹೇಳುತ್ತದೆ. ಆದರೆ ಮಾನವನ ಬುದ್ಧಿ ಕಾರ್ಯ, ಕಾರಣದ ಮತ್ತೊಂದು ರೂಪೆಂದು ಹೇಳುತ್ತದೆ. ಆಧುನಿಕ ವೈಜ್ಞಾನಿಕ ಶೋಧನೆ ದಿನಕ್ರಮೇಣ ಇದನ್ನು ಸಮರ್ಥಿಸುತ್ತದೆ. ಎಲ್ಲರ ಸಮ್ಮತಿಯನ್ನು ಪಡೆದ ಅತ್ಯಾಧುನಿಕವಾದ ನಿಯಮವೇ ವಿಕಾಸವಾದ ( Theory of evolution ). ಕಾರ್ಯ, ಕಾರಣದ ರೂಪಾಂತರವೆನ್ನುವುದು ಅದರ ಮುಖ್ಯತತ್ತ್ವ. ಅದು ಕಾರಣದ ಒಂದು ಪುನರ್ರಚನೆ. ಕಾರಣವೆ ಕಾರ್ಯದ ರೂಪಾಂತರವನ್ನು ಹೊಂದುವುದು. ಶೂನ್ಯದಿಂದ ಸೃಷ್ಟಿ ಎಂಬುದು ಆಧುನಿಕ ವೈಜ್ಞಾನಿಕರ ಅಪಹಾಸ್ಯಕ್ಕೆ ಗುರಿಯಾಗಿದೆ.

ಈಗ ಧರ್ಮ ಈ ಪರೀಕ್ಷೆಗಳನ್ನು ಎದುರಿಸಬಲ್ಲದೆ? ಈ ಎರಡು ಪರೀಕ್ಷೆಯಲ್ಲೂ ತೇರ್ಗಡೆಯಾಗಬಲ್ಲ ಧಾರ್ಮಿಕ ನಿಯಮಗಳಿದ್ದರೆ, ಆಧುನಿಕ ವಿಚಾರಪರರಿಗೆ ಸ್ವೀಕಾರ ಯೋಗ್ಯವಾಗಿರುತ್ತದೆ. ಬೇರೆ ಮತ್ತಾವ ಸಿದ್ಧಾಂತವನ್ನೂ ಆಗಲೀ, ಪಾದ್ರಿಗಳ, ಚರ್ಚಿನ ಅಥವಾ ಪುಸ್ತಕದ ಬಲದ ಮೇಲೆ ಇಂದಿನವರನ್ನು ನಂಬಿ ಎಂದು ಹೇಳಿದರೆ .ಅವರು ಅದನ್ನು ಒಪ್ಪಿಕೊಳ್ಳಲಾರರು. ಇದರ ಪರಿಣಾಮವೆ ಒಂದು ಅನಿಷ್ಟ ಅಪನಂಬಿಕೆಯರಾಶಿ. ಹೊರಗಡೆ ನಂಬಿಕೆಯನ್ನು ನಟಿಸುವವರ ಹೃದಯದ ಅಂತರಾಳದಲ್ಲಿ ಬೇಕಾದಷ್ಟು ಅನುಮಾನವಿದೆ. ಉಳಿದವರು ಧರ್ಮವೆಂದರೆ ಅದು ಒಂದು ಪುರೋಹಿತರ ಕಾರುಬಾರೆಂದು ತಿಳಿದು ಅದರಿಂದ ದೂರವಾಗಿರುವರು.

ಧರ್ಮವೆಂದರೆ ಒಂದು ರೀತಿಯ ಜನಾಂಗದ ಬಾಹ್ಯ ಆಚರಣೆ ಎಂಬ ಹೀನ ಸ್ಥಿತಿಗೆ ಇಂದು ತಂದಿರುವರು. ನಮ್ಮ ಸಮಾಜದಲ್ಲಿ ಹಿಂದೆ ಕೆಲಸಮಾಡಿ ಉಳಿದಿರುವ ಒಂದು ಅತ್ಯುತ್ತಮವಾದ ಅಂಗ ಧರ್ಮವೆಂಬುದು. ಆದುದರಿಂದ ಇದು

ಇರಲಿ. ಆದರೆ ನಮ್ಮ ತಾತಂದಿರಲ್ಲಿ ಧರ್ಮಕ್ಕೆ ಇದ್ದ ಅತ್ಯಾವಶ್ಯಕತೆ ಈಗಿನವರಲ್ಲಿ ಮಾಯವಾಗಿದೆ. ಅವನಿಗೆ ಇದು ತನ್ನ ವಿಚಾರ ದೃಷ್ಟಿಗೆ ಸಮರ್ಪಕವಾದಂತೆ ಕಾಣುವುದಿಲ್ಲ. ಇಂತಹ ಸಾಕಾರ ದೇವರು, ಇಂತಹ ಸೃಷ್ಟಿ, ಪ್ರತಿಯೊಂದು ಧರ್ಮದಲ್ಲಿಯೂ ಏಕದೇವವಾದವೆಂಬ ಇಂತಹ ಭಾವನೆಗಳು ಹೆಚ್ಚು ತಮ್ಮ ಕಾಲ ಮೇಲೆ ನಿಂತುಕೊಳ್ಳಲಾರವು. ಭರತಖಂಡದಲ್ಲಿಯಾದರೂ ಅವರು ಬುದ್ಧನ ದೆಶೆಯಿಂದ ತಾವು ತಲೆ ಎತ್ತದೇ ಹೋದರು. ಹಿಂದಿನಕಾಲದಲ್ಲಿ ಬೌದ್ಧರು ಜಯವನ್ನು ಪಡೆದದ್ದು ಈ ಒಂದು ವಿಚಾರದ ಮೇಲೆ. ಪ್ರಕೃತಿಗೆ ಅನಂತಶಕ್ತಿ ಇದೆ. ಪ್ರಕೃತಿ ತನ್ನ ಕಾರ್ಯಗಳನ್ನೆಲ್ಲ ತಾನೆ ನಡೆಸಿಕೊಳ್ಳಬಲ್ಲದು ಎಂಬುದನ್ನು ಒಪ್ಪಿಕೊಂಡರೆ, ಪ್ರಕೃತಿಗಿಂತ ಮತ್ತೊಂದು ಬೇರೆ ಇದೆ ಎಂದು ಒಪ್ಪಿಕೊಳ್ಳುವುದು ಅನಾವಶ್ಯಕ ವೆಂಬುದನ್ನು ತೋರಿದರು. ಆತ್ಮನೂಕೂಡ ಅನಾವಶ್ಯಕ.

ಗುಣ ಮತ್ತು ಗುಣಿಗಳ ಚರ್ಚೆ ಬಹಳ ಹಳೆಯದು. ಕೆಲವುವೇಳೆ ಹಳೆಯ ಮೂಢ ನಂಬಿಕೆಗಳು ಇಂದಿಗೂ ಕೂಡ ಇದೆ ಎಂಬುದನ್ನು ನೀವು ನೋಡಬಹುದು. ಮಧ್ಯಕಾಲದಲ್ಲಿ (Middle ages) ಮತ್ತು ಅದಾದ ಮೇಲೆಯೂ ಕೂಡ ಕೆಲವು ಕಾಲ ಇದ್ದಿತೆಂದು ಹೇಳುವುದಕ್ಕೆ ವ್ಯಸನವಾಗುವುದು. ಉದ್ದ ಅಗಲ ದಪ್ಪ ವೆಂಬ ಗುಣಗಳು ನಾವು ಅಚೇತನವೆಂದು ಕರೆಯುವ ಗುಣಿಗೆ ಸೇರಿದವೆ? ಗುಣಗಳು ಇರಲಿ ಇಲ್ಲದಿರಲಿ ಅದರ ಹಿಂದೆ ಗುಣಿ ಒಂದು ಇದೆ, ಇವು ಚರ್ಚೆಯ ಒಂದು ಮುಖ್ಯವಿಷಯವಾಗಿತ್ತೆಂಬುದನ್ನು ಓದಿರುವೆವು. ಅದಕ್ಕೆ ನಮ್ಮ ಬೌದ್ಧರು "ಅಂತಹ ಒಂದು ಗುಣಿ ಇದೆ ಎಂದು ಹೇಳುವುದಕ್ಕೆ ಸಾಕಾದಷ್ಟು ಆಧಾರವಿಲ್ಲ, ಗುಣಗಳೊಂದೇ ಇರುವುದು. ಇದರ ಆಚೆ ಮತ್ತೇನೂ ಇರುವುದು ಎನ್ನುವುದು ನಿಮಗೇನೂ ಕಾಣುವುದಿಲ್ಲ" ಎನ್ನುವರು. ಮುಕ್ಕಾಲುಪಾಲು ಆಧುನಿಕ ಅಜ್ಞೇಯವಾದಿಗಳ ಸ್ಥಿತಿಯೆ ಇದು. ಗುಣ ಗುಣಿಗಳ ಚರ್ಚೆಯೆ ಮುಂದುವರಿದರೆ ವ್ಯಕ್ತ ಅವ್ಯಕ್ತಗಳ ಚರ್ಚೆಯ ರೂಪವನ್ನು ತಾಳುವುದು. ಇಲ್ಲಿ ಅನವರತವೂ ಚಲಿಸುತ್ತಿರುವ ವ್ಯಕ್ತ ಸೃಷ್ಟಿ ಇದೆ. ಅದರ ಹಿಂದೆ ಅವಿಕಾರವಾದ ಯಾವುದೋ ಒಂದು ವಸ್ತುವಿದೆ. ಈ ವ್ಯಕ್ತ ಅವ್ಯಕ್ತ ವೆಂಬ ದ್ವಂದ್ವ ಅಸ್ತಿತ್ವವನ್ನು ಕೆಲವರು ನಿಜವೆಂದು ನಂಬುವರು. ಉಳಿದವರು ಇನ್ನೂ ಉತ್ತಮ ಕಾರಣಗಳಿಂದ ನಿಮಗೆ ಎರಡನ್ನೂ ಒಪ್ಪಿಕೊಳ್ಳುವುದಕ್ಕೆ ಸಾಕಾದಷ್ಟು ಪ್ರಮಾಣವಿಲ್ಲ. ಏಕೆಂದರೆ ನಾವು ನೋಡುವುದು, ಅನುಭವಿಸುವುದು ಆಲೋಚಿಸುವುದು ಎಲ್ಲಾ ವ್ಯಕ್ತವಾದುದು ಮಾತ್ರ. ವ್ಯಕ್ತದಾಚೆ ಮತ್ತೊಂದು ಏನೊ ಇದೆ ಎಂದು ಹೇಳಲು ನಿಮಗೆ ಅಧಿಕಾರವಿಲ್ಲ ಎನ್ನುವರು. ಇದಕ್ಕೆ ಉತ್ತರವೇ

ಇಲ್ಲ. ನಿಮಗೆ ಸಿಕ್ಕುವ ಏಕಮಾತ್ರ ಉತ್ತರ ಅದ್ವೈತ ವೇದಾಂತ ಸಿದ್ಧಾಂತದ ಮೂಲಕ ಮಾತ್ರ. ಇರುವುದು ಒಂದು ಮಾತ್ರ ಎನ್ನುವುದು ಸತ್ಯ. ಅದು ವ್ಯಕ್ತ ಅಥವಾ ಅವ್ಯಕ್ತವಾದುದು. ಎರಡು ವಸ್ತುಗಳಿವೆ, ಒಂದು ವಿಕಾರವಾದುದು ಮತ್ತೊಂದು ಅವಿಕಾರವಾದುದು ಎನ್ನುವುದು ಸತ್ಯವಲ್ಲ. ಇರುವ ಒಂದೇ ಒಂದು ವಸ್ತು ವಿಕಾರವಾದಂತೆ ತೋರುವುದು. ಆದರೆ ಅದು ಅವಿಕಾರ ವಾದುದು. ನಾವು ದೇಹ, ಮನಸ್ಸು, ಆತ್ಮ, ಹಲವು ಇವೆ ಎಂದು ತಿಳಿಯಲು ಮೊದಲು ಮಾಡಿರುವೆವು. ಆದರೆ ನಿಜವಾಗಿಯೂ ಇರುವುದು ಒಂದೆ. ಆ ಒಂದೇ ನಾನಾ ರೂಪುಗಳಲ್ಲಿ ಕಾಣಿಸುತ್ತಿರುವುದು. ಅದ್ವೈತಿಗಳ ಪ್ರಖ್ಯಾತವಾದ ಉದಾಹರಣೆಯಾದ "ಹಾವಿನಂತೆ ಕಾಣುವ ಹಗ್ಗ" ವನ್ನು ತೆಗೆದುಕೊಳ್ಳಿ. ಕೆಲವರು ಕತ್ತಲೆಯಲ್ಲೋ ಅಥವಾ ಇನ್ನು ಯಾವುದಾದರೂ ಕಾರಣದಿಂದಲೋ ಹಗ್ಗವನ್ನು ಹಾವೆಂದು ಭ್ರಮಿಸುವರು. ಆದರೆ ನಮಗೆ ತಿಳಿವಳಿಕೆ ಬಂದಾಗ ಹಾವು ಮಾಯವಾಗಿ ಹಗ್ಗದಂತೆ ಕಾಣುವುದು. ಈ ಉದಾಹರಣೆಯಿಂದ ನಮಗೆ, ಹಾವು ಮನಸ್ಸಿನಲ್ಲಿದ್ದಾಗ, ಹಗ್ಗ ಮಾಯವಾಗಿರುವುದು. ಹಗ್ಗ ಇದ್ದಾಗ ಹಾವು ಮಾಯವಾಗುವುದು, ಕಾಣುವುದು. ನಮ್ಮ ಸುತ್ತಲೂ ನಾವು ವ್ಯಕ್ತವನ್ನೇ ಯಾವಾಗ ನೋಡುವೆವೋ, ಆಗ ಅವ್ಯಕ್ತ ಮಾಯವಾಗಿದೆ. ಅವಿ ಕಾರಿಯಾದ ಅವ್ಯಕ್ತವನ್ನು ಯಾವಾಗ ನೋಡುವೆವೋ, ಆಗ ವ್ಯಕ್ತ ಮಾಯ ವಾಗಿದೆ ಎಂದು ಸ್ವಭಾವತಃ ನಿರ್ಣಯವಾಗುವುದು. ವಸ್ತುವಾದಿ (Realist) ಭಾವವಾದೀ (Idealist) ಗಳ ಸ್ಥಿತಿಗಳನ್ನು ನಾವು ಈಗ ಚೆನ್ನಾಗಿ ತಿಳಿದು ಕೊಳ್ಳುವೆವು. ವಸ್ತುವಾದಿ ವ್ಯಕ್ತವನ್ನು ಮಾತ್ರ ನೋಡುವನು. ಭಾವವಾದಿ ಅವ್ಯಕ್ತವನ್ನು ನೋಡುವನು. ಭಾವವಾದಿಗೆ, ಸತ್ಯವಾಗಿಯೂ ನಿಷ್ಕಪಟವಾದ ಭಾವವಾದಿಗೆ, ವಿಕಾರ ಭಾವಗಳನ್ನು ಮೀರಬಲ್ಲ ಗ್ರಹಣ ಶಕ್ತಿಯ ಅರಿವಾದವನಿಗೆ, ಈ ವಿಕಾರವಾದ ಪ್ರಪಂಚ ಮಾಯವಾಗಿದೆ. ಇದೆಲ್ಲ ಭ್ರಮೆ. ನಿಜವಾಗಿಯೂ ಇರುವುದೊಂದೇ ಎಂದು ಹೇಳುವುದಕ್ಕೆ ಅವನಿಗೆ ಅಧಿಕಾರವಿದೆ.

ಈ ತತ್ತ್ವಶಾಸ್ತ್ರದ ಪರಿಣಾಮವೇನಾಯಿತು? ಅದೇ ಸಾಕಾರ ದೇವರ ಭಾವನೆ ಸಾಲದೆಂಬುದು. ಇದಕ್ಕಿಂತ ಮೇಲಿರುವ ನಿರಾಕಾರ ಬ್ರಹ್ಮಕ್ಕೆ ಹೋಗ ಬೇಕು. ನಾವು ತೆಗೆದುಕೊಳ್ಳಬೇಕಾದ ಮುಂದಿನ ನ್ಯಾಯಮಾರ್ಗವೇ ಇದು. ಇದರಿಂದ ಸಾಕಾರ ದೇವರ ಭಾವನೆ ನಾಶವಾಗುತ್ತದೆ ಎಂದು ಅಲ್ಲ. ಸಾಕಾರ ದೇವರಿಲ್ಲ ಎನ್ನುವುದಕ್ಕೆ ಸಾಕಾದಷ್ಟು ಪ್ರಮಾಣವನ್ನು ನಾವು ಒದಗಿಸುತ್ತೇವೆ ಎಂದೂ ಅಲ್ಲ. ಆದರೆ ಸಾಕಾರ ದೇವರನ್ನು ವಿವರಿಸಬೇಕಾದರೆ ನಾವು ನಿರಾ

ಕಾರಕ್ಕೆ ಹೋಗಲೇಬೇಕು. ಏಕೆಂದರೆ ನಿರಾಕಾರ ಸಾಕಾರಕ್ಕಿಂತ ಹೆಚ್ಚು ಸಾಮಾನ್ಯಕ್ಕೆ ತರುವ ವಿಧಾನ. ನಿರಾಕಾರವೊಂದೆ ಅನಂತವಾಗಬಲ್ಲದು. ಸಾಕಾರವು ಅಂತವಾದದ್ದು. ಹೀಗೆ ನಾವು ಸಾಕಾರವನ್ನು ಉಳಿಸಿಕೊಳ್ಳುತ್ತೇವೆ. ಅದನ್ನು ನಾಶಮಾಡುವುದಿಲ್ಲ. ನಿರಾಕಾರದೇವರ ಭಾವನೆಗೆ ಬಂದರೆ ಸಾಕಾರ ದೇವರ ಉಳಿವಿಲ್ಲ; ನಿರಾಕಾರ ಮಾನವನ ಭಾವನೆ ಬಂದರೆ, ಮಾನವನ ಪೃಥಕ್‌ಭಾವ ನಾಶವಾಗುವುದು ಎಂಬ ಸಂಶಯ ಅನೇಕವೇಳೆ ಬರುವುದು. ಆದರೆ ವ್ಯಕ್ತಿಯ ಉದ್ಧಾರ ಹೊರತು ಅದನ್ನು ಧ್ವಂಸ ಮಾಡುವುದಲ್ಲ ವೇದಾಂತದ ಗುರಿ. ವ್ಯಕ್ತಿಯ ವೈಶಿಷ್ಟ್ಯವನ್ನು ಸರ್ವವ್ಯಾಪಿಯಾದ ವಸ್ತುವಿನೊಂದಿಗೆ ಹೋಲಿಸಿದಲ್ಲದೆ ಈ ಏಕವೆ ನಿಜವಾಗಿಯೂ ಸರ್ವವ್ಯಾಪಿಯಾದುದೆಂದು ತೋರಿದಲ್ಲದೆ ಅದನ್ನು ನಾವು ಸಮರ್ಥಿಸುವುದಕ್ಕೆ ಆಗುವುದಿಲ್ಲ. ಪ್ರಪಂಚದಲ್ಲಿರುವ ಸಕಲ ವಸ್ತುಗಳಿಗಿಂತಲೂ ಈ ಪೃಥಕ್‌ಭಾವ ಬೇರೆಯಾದುದೆಂದು ತಿಳಿದರೆ ಅದು ಒಂದು ನಿಮಿಶವೂ ಕೂಡ ಇರಲಾರದು. ಅಂತಹ ವಸ್ತು ಎಂದಿಗೂ ಇರಲಿಲ್ಲ.

ವಿವರಣೆಯು ವಸ್ತುವಿನ ಸ್ವಭಾವದಿಂದಲೇ ಬರಬೇಕು, ಎಂಬ ಎರಡನೆಯ ನಿಯಮವನ್ನು ಪ್ರಯೋಗಿಸುವುದರ ಮೂಲಕ, ಮತ್ತೂ ಧೈರ್ಯವಾದ, ತಿಳಿದುಕೊಳ್ಳಲು ಅತಿ ಗಹನವಾದ ಭಾಗಕ್ಕೆ ಬರುವೆವು. ಅದೇನೂ ಮುಂದೆ ಹೇಳುವುದಕ್ಕಿಂತ ಕಡಿಮೆಯಿಲ್ಲ. ಆ ನಿರಾಕಾರ ವ್ಯಕ್ತಿಯು, ನಮ್ಮ ಅತ್ಯುತ್ತಮವಾದ ಸರ್ವಸಾಮಾನ್ಯತೆಯು ನಮ್ಮಲ್ಲಿಯೇ ಇರುವುದು ಮತ್ತು ನಾವೆ ಅದು. "ಓ, ಶ್ವೇತಕೇತು ನೀನೇ ಅದು'' ನೀನೇ ಆ ನಿರಾಕಾರವಾದ ವ್ಯಕ್ತಿ. ಯಾವ ದೇವರಿಗೋಸುಗ ನೀನು ಪ್ರಪಂಚದಲ್ಲೆಲ್ಲ ಹುಡುಕುತ್ತಿದ್ದೆಯೋ, ಅದೇ ಯಾವಾಗಲೂ ನೀನಾಗಿದ್ದೆ– ನೀನು ಎಂದರೆ ವ್ಯಕ್ತ ದೃಷ್ಟಿಯಿಂದ ಅಲ್ಲ. ಅವ್ಯಕ್ತ ದೃಷ್ಟಿಯಿಂದ. ನಾವು ವ್ಯಕ್ತಿತ್ವವನ್ನು ತಿಳಿದುಕೊಳ್ಳಬೇಕಾದರೆ ಅದನ್ನು ವ್ಯಕ್ತಿತ್ವಭಾವರಹಿತ ವಾದುದರೊಂದಿಗೆ ಹೋಲಿಸಬೇಕು. ಏಕವನ್ನು ನಾವು ಸರ್ವಸಾಮಾನ್ಯಕ್ಕೂ ಹೋಲಿಸಬೇಕು. ಆ ಅವ್ಯಕ್ತವೇ ಸತ್ಯ. ಅದೇ ಮಾನವನ ಆತ್ಮ.

ಇವುಗಳಿಗೆ ಸಂಬಂಧಪಟ್ಟ ಅನೇಕ ಪ್ರಶ್ನೆಗಳಿರುತ್ತವೆ. ಮುಂದುವರಿದಂತೆಲ್ಲ ಅವುಗಳಿಗೆ ಸಮಾಧಾನ ಹೇಳಲು ಪ್ರಯತ್ನಿಸುತ್ತೇನೆ. ಅನೇಕ ತೊಂದರೆಗಳು ಮೇಲೇಳುತ್ತವೆ. ಆದರೆ ಮೊದಲು ಅದ್ವೈತಿಯ ದೃಷ್ಟಿಯಿಂದ ಚೆನ್ನಾಗಿ ತಿಳಿದುಕೊಳ್ಳೋಣ. ವ್ಯಕ್ತ ದೃಷ್ಟಿಯಿಂದ ನಾವು ಬೇರೆಯಾಗಿರುವಂತೆ ಕಾಣುವೆವು. ಆದರೆ ಸತ್ಯ ಒಂದು. ಆ ಏಕದಿಂದ ನಾವು ಬೇರೆಯಾಗಿಲ್ಲ ಎಂದು ಎಷ್ಟು ಕಡಿಮೆ ಆಲೋಚಿಸಿದರೆ ಅಷ್ಟು ಮೇಲು. ಪೂರ್ಣರಾದ ನಾವು ಬೇರೆ

ಎಂದು ಎಷ್ಟು ಹೆಚ್ಚು ಆಲೋಚಿಸುವೆವೊ ಅಷ್ಟು ದುಃಖಕ್ಕೆ ಈಡಾಗುವೆವು. ಈ ಅದ್ವೈತ ತತ್ತ್ವದ ಮೂಲಕ ನಾವು ನೀತಿಯು ತಳಹದಿಗೆ ಬರುತ್ತೇವೆ. ಮತ್ತೆಲ್ಲಿಂದಲೂ ಯಾವ ನೀತಿಯೂ ಸಿಕ್ಕುವುದಿಲ್ಲವೆಂದು ನಾನು ಧೈರ್ಯವಾಗಿ ಹೇಳ ಬಲ್ಲೆ. ನೀತಿಯ ಹಳೆಯ ಭಾವನೆ ಯಾವುದಾಗಿತ್ತು ಎಂದರೆ, ಯಾರೋ ಒಬ್ಬರ ಅಥವಾ ಹಲವರ ಇಚ್ಛೆ ನೀತಿಗೆ ಆಧಾರವಾಗಿತ್ತು. ಆದರೆ ಈಗಿನಕಾಲದಲ್ಲಿ ಅದನ್ನು ಒಪ್ಪುವವರು ಬಹಳ ಕಡಿಮೆ. ಏಕೆಂದರೆ ಅದು ಅಸಮರ್ಪಕವಾದ ಸಾಮಾನ್ಯ ಧರ್ಮಕ್ಕೆ ತರುವ ವಿಧಾನ. ಇವನ್ನು ಮತ್ತು ಅವನ್ನು ಮಾಡಬಾರದು. ಏಕೆಂದರೆ ವೇದ ಹಾಗೆ ಹೇಳುತ್ತದೆ ಎಂದು ಹಿಂದು ಹೇಳುತ್ತಾನೆ. ಆದರೆ ಕ್ರೈಸ್ತನು ವೇದದ ಪ್ರಮಾಣವನ್ನು ಒಪ್ಪುವುದಿಲ್ಲ. ನೀನು ಇವು ಅವನ್ನು ಮಾಡ ಬಾರದು ಬೈಬಲ್ಲಿನಲ್ಲಿ ಹಾಗೆ ಹೇಳುತ್ತದೆ ಎಂದು ಕ್ರೈಸ್ತನು ಹೇಳುತ್ತಾನೆ. ಯಾರಿಗೆ ಬೈಬಲ್ಲಿನಲ್ಲಿ ನಂಬಿಕೆ ಇಲ್ಲವೋ ಅವರ ಮೇಲೆ ಇದು ತನ್ನ ಅಧಿಕಾರವನ್ನು ಚಲಾ ಯಿಸಲಾರದು. ಈ ಎಲ್ಲಾ ವಿಭಾಗಗಳನ್ನು ಕೂಡ ಆವರಿಸುವಷ್ಟು ವಿಸ್ತಾರ ಸಿದ್ಧಾಂತ ನಮಗೆ ಬೇಕಾಗಿದೆ. ಹೇಗೆ ಸಾಕಾರ ಸೃಷ್ಟಿಕರ್ತನಲ್ಲಿ ನಂಬುವುದಕ್ಕೆ ಲಕ್ಷಾಂತರ ಜನರು ಸಿದ್ಧರಾಗಿದ್ದರೋ, ಅದರಂತೆಯೇ ಪ್ರಪಂಚದಲ್ಲಿ ಸಾವಿರಾರು ಜನ ಅತ್ಯಂತ ಬುದ್ಧಿವಂತರು ಅಂತಹ ಸಾಕಾರ ಸೃಷ್ಟಿಕರ್ತನು ತಮಗೆ ತೃಪ್ತಿಕರ ವಾಗಿಲ್ಲವೆಂದು ಭಾವಿಸಿದವರಿದ್ದರು. ಅದಕ್ಕಿಂತ ಉತ್ತಮವಾದುದನ್ನು ಆಶಿ ಸಿದರು. ಎಲ್ಲಿ ಇಂತಹ ವಿಚಾರಪರರನ್ನು ಸೇರಿಸಿಕೊಳ್ಳುವಷ್ಟು ವಿಸ್ತಾರವಾಗಿ ಧರ್ಮವಿರಲಿಲ್ಲವೋ ಅಲ್ಲಿ ಸಮಾಜದ ಅತಿ ಪ್ರತಿಭಾವಂತರು ಧರ್ಮಕ್ಕೆ ಬಾಹಿರ ರಾಗಿದ್ದುದೇ ಪರಿಣಾಮವಾಯಿತು. ಇಂದಿನ ಕಾಲದಲ್ಲಿ ಅದರಲ್ಲೂ ಯೂರೋಪಿ ನಲ್ಲಿ ಇರುವಂತೆ ಎಂದಿಗೂ ಆಗಲಿಲ್ಲ.

ಇಂತಹ ವಿಚಾರಪರರನ್ನು ಸೇರಿಸಿಕೊಳ್ಳಬೇಕಾದರೆ ಧರ್ಮ ಸಾಕಾದಷ್ಟು ವಿಶಾಲವಾಗಿರಬೇಕು. ಧರ್ಮ ಸಾರುವ ಎಲ್ಲವನ್ನು ವಿಚಾರ ದೃಷ್ಟಿಯಿಂದ ಪರೀ ಕ್ಷಿಸಬೇಕು. ಯುಕ್ತಿದೃಷ್ಟಿಗೆ ತಾವು ಬದ್ಧರಲ್ಲವೆಂದು ಧರ್ಮ ಏತಕ್ಕೆ ಹೇಳಿಕೊಳ್ಳ ಬೇಕು. ಅದು ಯಾರಿಗೂ ತಿಳಿಯದು. ಯುಕ್ತಿ ಪ್ರಮಾಣವನ್ನು ನಾವು ತೆಗೆದು ಕೊಳ್ಳದೇ ಇದ್ದರೆ ಧಾರ್ಮಿಕ ವಿಷಯದಲ್ಲಿಯೂ ಕೂಡ ಸರಿಯಾದ ನಿರ್ಣಯವಿರ ಲಾರದು. ಒಂದು ಧರ್ಮ ಅತಿ ತಿರಸ್ಕರಣೀಯವಾದುದನ್ನು ಆಜ್ಞಾಪಿಸಬಹುದು. ಉದಾಹರಣೆಗೆ ಇಸ್ಲಾಮ್ ಧರ್ಮ ತಮ್ಮ ಧರ್ಮಕ್ಕೆ ಸೇರದವರೆಲ್ಲರನ್ನೂ ಕೊಲ್ಲುವು ದಕ್ಕೆ ಒಪ್ಪುತ್ತದೆ. "ನಾಸ್ತಿಕರು ಮಹಮ್ಮದೀಯರಾಗದೆ ಇದ್ದರೆ ಅವರನ್ನು ಕೊಲ್ಲಿ" ಎಂದು ಖುರಾನಿನಲ್ಲಿ ಸ್ಪಷ್ಟವಾಗಿ ಹೇಳುತ್ತದೆ. ಅವರನ್ನು ಕತ್ತಿಗೆ ಬಲಿ

ಕೊಡಬೇಕು. ಬೆಂಕಿಗೆ ಹಾಕಬೇಕು. ಮಹಮ್ಮದೀಯನಿಗೆ ಇದು ಸರಿಯಲ್ಲ ವೆಂದರೆ ಅವನು, "ಅದು ನಿಮಗೆ ಹೇಗೆ ಗೊತ್ತು? ಅದು ಒಳ್ಳೆಯದಲ್ಲವೆಂದು ನಿಮಗೆ ಹೇಗೆ ಗೊತ್ತು?. ನನ್ನ ಗ್ರಂಥ ಅದು ಪರಮ ಪವಿತ್ರವೆಂದು ಸಾರುತ್ತದೆ" ಎನ್ನುತ್ತಾನೆ. ನಿಮ್ಮ ಗ್ರಂಥ (ಬೈಬಲ್) ಖುರಾನಿಗಿಂತ ಹಳೆಯದು ಎಂದರೆ, ಬೌದ್ಧರು ಬಂದು ತಮ್ಮ ಗ್ರಂಥ ಅದಕ್ಕಿಂತಲೂ ಪುರಾತನವಾದುದೆಂದು ಹೇಳುತ್ತಾರೆ. ನಂತರ ಹಿಂದು ಬಂದು ತನ್ನ ಗ್ರಂಥವೇ ಎಲ್ಲದಕ್ಕಿಂತಲೂ ಅತ್ಯಂತ ಪುರಾತನ ಗ್ರಂಥವೆನ್ನುತ್ತಾರೆ. ಆದುದರಿಂದ ಗ್ರಂಥವನ್ನು ಆಧಾರಕ್ಕೆ ತರುವುದರಿಂದ ಪ್ರಯೋಜನವಿಲ್ಲ. ನೀವು ಒಂದನ್ನು ಮತ್ತೊಂದರೊಂದಿಗೆ ಹೋಲಿಸಬಲ್ಲ ಪ್ರಮಾಣವೆಲ್ಲಿದೆ. ನೀವು (ಅಂದರೆ ಕ್ರೈಸ್ತರು) ಕ್ರಿಸ್ತ ಗುಡ್ಡದ ಮೇಲೆ ಮಾಡಿದ ಉಪದೇಶವನ್ನು ನೋಡಿ ಎನ್ನಬಹುದು. ಮಹಮ್ಮದೀಯ, ಖುರಾನಿನಲ್ಲಿರುವ ನೀತಿಯನ್ನು ನೋಡಿ ಎಂದು ಉತ್ತರ ಕೊಡುವನು. ಎರಡರಲ್ಲಿ ಯಾವುದು ಸರಿ ಎಂದು ನಿಶ್ಚಯಿಸುವ ಮಧ್ಯಸ್ಥಗಾರನಾರು ಎಂದು ಮಹಮ್ಮದೀಯನು ಕೇಳುತ್ತಾನೆ. ಅವರಿಬ್ಬರಿಗೂ ಇರುವ ವ್ಯಾಜ್ಯದಲ್ಲಿ ಖುರಾನಾಗಲೀ ನ್ಯೂಟೆಸ್ಟಮೆಂಟ್ ಆಗಲೀ ಮಧ್ಯಸ್ಥಿಗೆಗಾರನ ಸ್ಥಾನವನ್ನು ವಹಿಸಲಾರದು. ಒಂದು ಸ್ವತಂತ್ರವಾದ ಅಧಿಕಾರ ಅಲ್ಲಿರಬೇಕು. ಅದು ಯಾವ ಗ್ರಂಥವೂ ಆಗಲಾರದು. ಸರ್ವರಿಗೂ ಸಾಮಾನ್ಯವಾದುದು ಯಾವುದಾದರೂ ಆಗಬೇಕು. ಯುಕ್ತಿಗಿಂತ ಸರ್ವಸಾಮಾನ್ಯವಾದುದು ಯಾವುದಿದೆ? ಯುಕ್ತಿ ಅಷ್ಟೇನೂ ಬಲವಾದುದಲ್ಲ. ಸತ್ಯವನ್ನರಿಯಲು ನಮಗೆ ಅದು ಯಾವಾಗಲೂ ಸಹಾಯಮಾಡುವುದಿಲ್ಲ. ಅನೇಕ ವೇಳೆ ಇದು ತಪ್ಪುಮಾಡುತ್ತದೆ ಎನ್ನುತ್ತಾರೆ. ಆದಕಾರಣ ನಿರ್ಣಯವೇನೆಂದರೆ ಚರ್ಚಿನ ಅಧಿಕಾರದಲ್ಲಿ ನಂಬಲೇ ಬೇಕು! ಹೀಗೆಂದು ಒಬ್ಬ ರೋಮನ್ ಕ್ಯಾಥೋಲಿಕ್. ನನಗೆ ಹೇಳಿದನು. ಆದರೆ ಅದರ ಯುಕ್ತಿ ನನಗೆ ಸರಿ ತೋರಲಿಲ್ಲ. ಯುಕ್ತಿಯೇ ಅಷ್ಟು ನಿರ್ಬಲವಾದರೆ ಅದಕ್ಕಿಂತ ಹೆಚ್ಚು ನಿರ್ಬಲರು ಪಾದ್ರಿಗಳ ಗುಂಪು ಎಂದು ನಾನು ಹೇಳುತ್ತೇನೆ. ಅವರ ಅಭಿಪ್ರಾಯವನ್ನು ನಾನು ಸ್ವೀಕರಿಸುವುದಿಲ್ಲ. ನಾನು ನನ್ನ ಯುಕ್ತಿಯನ್ನು ತೊರೆಯುವುದಿಲ್ಲ. ಏಕೆಂದರೆ ಅದು ಎಷ್ಟೇ ನಿರ್ಬಲವಾದರೂ, ಅದರ ಮೂಲಕ ಸತ್ಯವನ್ನು ತಿಳಿಯುವುದಕ್ಕೆ ಸ್ವಲ್ಪ ಅವಕಾಶವಿದೆ. ಆದರೆ ಬೇರೆಯ ಮಾರ್ಗದಲ್ಲಿಯಾದರೋ ಅಂತಹ ಒಂದು ಭರವಸೆಯೇ ಇಲ್ಲ.

ಆದಕಾರಣ ನಾವು ಯುಕ್ತಿಯನ್ನು ಅನುಸರಿಸಬೇಕು ಮತ್ತು ಅದನ್ನು ಅನುಸರಿಸಿ ಯಾವ ನಿರ್ಧರಕ್ಕೂ ಬರದವರೊಂದಿಗೆ ಸಹಾನುಭೂತಿಯನ್ನು

ತೋರಬೇಕು. ಇನ್ನೊಬ್ಬರ ಅಧಿಕಾರದಮೇಲೆ ಎರಡು ಕೋಟಿ ದೇವರಲ್ಲಿ ಕಣ್ಣು ಮುಚ್ಚಿಕೊಂಡು ನಂಬುವದಕ್ಕಿಂತಲೂ ಜನಾಂಗ ನಾಸ್ತಿಕರಾಗುವುದು ಮೇಲು. ನಮಗೆ ಬೇಕಾಗಿರುವುದು ಪ್ರಗತಿ, ಬೆಳವಣಿಗೆ, ಸಾಕ್ಷಾತ್ಕಾರ. ಯಾವ ಸಿದ್ಧಾಂತಗಳೂ ಎಂದಿಗೂ ಮಾನವನನ್ನು ಉತ್ತಮರನ್ನಾಗಿ ಮಾಡಿಲ್ಲ. ಎಷ್ಟು ಗ್ರಂಥ ರಾಶಿಯಾದರೂ ನಮ್ಮನ್ನು ಪವಿತ್ರರನ್ನಾಗಿ ಮಾಡಲು ಸಹಾಯ ಮಾಡಲಾಗದು. ಸತ್ಯ ಸಾಕ್ಷಾತ್ಕಾರ ಒಂದರಲ್ಲಿಯೇ ಶಕ್ತಿ ಇರುವುದು. ಅದಕ್ಕೆ ಶಕ್ತಿ ನಮ್ಮಲ್ಲಿಯೇ ಇರುವುದು. ಅದನ್ನು ತಿಳಿಯುವುದರಿಂದ ಅದು ನಮಗೆ ಬರುವುದು. ಮಾನವರು ವಿಚಾರಪರರಾಗಲಿ. ಒಂದು ಮಣ್ಣಿನ ಮುದ್ದೆ ಎಂದಿಗೂ ವಿಚಾರಿಸುವುದಿಲ್ಲ. ಆದರೆ ಅದು ಒಂದು ಮಣ್ಣಿನ ಮುದ್ದೆಯಾಗಿಯೇ ಉಳಿಯುವುದು. ಮಾನವನು ಒಂದು ಆಲೋಚನಾ ಜೀವಿಯಾಗಿರುವುದೇ ಆತನ ಒಂದು ಹಿರಿಮೆ. ಈ ವಿಷಯದಲ್ಲಿ ಮಾತ್ರ ಆತನು ಮೃಗಗಳಿಗಿಂತ ಬೇರೆಯಾಗಿರುವನು. ನಾನು ಯುಕ್ತಿಯಲ್ಲಿ ನಂಬುತ್ತೇನೆ ಮತ್ತು ಯುಕ್ತಿಯನ್ನು ಅನುಸರಿಸುತ್ತೇನೆ. ಅಧಿಕಾರವಾದದ ದುರುಪಯೋಗವನ್ನು ನಾನು ಬೇಕಾದಷ್ಟು ನೋಡಿರುವೆನು. ಏಕೆಂದರೆ ಅಧಿಕಾರ ತನ್ನ ಪರಾಕಾಷ್ಠತೆಯನ್ನು ಮುಟ್ಟಿದ ದೇಶದಲ್ಲಿ ನಾನು ಜನ್ಮತಾಳಿದೆ.

ಸೃಷ್ಟಿಯು ವೇದಗಳಿಂದ ಬಂದಿದೆ ಎಂದು ಹಿಂದುಗಳು ನಂಬುತ್ತಾರೆ. ಒಂದು ಹಸುವಿದೆ ಎಂದು ನಿನಗೆ ಹೇಗೆ ಗೊತ್ತು? ಏಕೆಂದರೆ ವೇದದಲ್ಲಿ ಹಸು ಎಂಬ ಪದವಿದೆ. ಹೊರಗೆ ಒಬ್ಬ ಮನುಷ್ಯನು ಇರುವನು ಎಂಬುದು ಹೇಗೆ ಗೊತ್ತು? ಏಕೆಂದರೆ ಮನುಷ್ಯನೆಂಬ ಪದ ವೇದದಲ್ಲಿದೆ. ಅದು ಅಲ್ಲಿ ಇಲ್ಲದೇ ಇದ್ದರೆ ಹೊರಗೆ ಮನುಷ್ಯರೇ ಇರುತ್ತಿರಲಿಲ್ಲ. ಅವರು ಹೇಳುವುದೇ ಇದು. ಸೇಡುತೀರಿಸಿಕೊಳ್ಳುವಷ್ಟು ಭ್ರಮೆ ಅಧಿಕಾರದಮೇಲೆ. ನಾನು ಅದನ್ನು ಅಧ್ಯಯನ ಮಾಡಿದಂತೆ ಮಾಡಲಿಲ್ಲ ಅವರು. ಅತ್ಯಂತ ಪ್ರತಿಭಾಶಾಲಿಗಳಲ್ಲಿ ಕೆಲವರು ಇದನ್ನು ತೆಗೆದುಕೊಂಡು, ಅದರ ಸುತ್ತಲೂ ಅತ್ಯಂತ ಸೂಕ್ಷ್ಮವಾದ ಯುಕ್ತಿಪೂರಿತ ಸಿದ್ಧಾಂತಗಳನ್ನು ನೆಯ್ದಿರುವರು. ಅದನ್ನು ಆವರು ಕೂಲಂಕಷವಾಗಿ ವಿಚಾರಿಸಿರುವರು. ಒಂದು ತತ್ತ್ವ ಸಂಪ್ರದಾಯ ಮಾತ್ರವಲ್ಲ. ಸಾವಿರಾರು ವರುಷಗಳಿಂದಲೂ ಸಹಸ್ರಾರು ಪ್ರತಿಭಾವಂತರು ಈ ತತ್ತ್ವನಿರ್ಣಯಕ್ಕೋಸುಗವಾಗಿ ಈ ಜೀವನವನ್ನು ಅರ್ಪಿಸಿರುವರು. ಅಧಿಕಾರದ ಶಕ್ತಿ ಹೀಗಿರುವುದು. ಅದರಲ್ಲಿರುವ ಅಪಾಯಗಳೆಷ್ಟು! ಅದು ಮಾನವನ ಬೆಳವಣಿಗೆಗೆ ಆತಂಕವನ್ನು ತರುವುದು. ನಾವು ಬೆಳೆಯಬೇಕೆಂಬುದನ್ನು ಎಂದಿಗೂ ಮರೆಯಕೂಡದು. ಎಲ್ಲಾ ಸಾಂಬಂಧಿಕ ಸತ್ಯ

ದಲ್ಲಿಯೂ ಸತ್ಯಕ್ಕಿಂತ ಹೆಚ್ಚಾಗಿ ನಮಗೆ ತರ್ಕದಮೇಲೆ ಆಸೆ. ಇದೇ ನಮ್ಮ ಬಾಳು.

ಅದ್ವೈತ ಸಿದ್ಧಾಂತಕ್ಕೆ ಈ ಒಂದು ಗುಣವಿದೆ. ನಾವು ವಿಚಾರಿಸಬಹು ದಾದ ಧಾರ್ಮಿಕ ತತ್ತ್ವಗಳಲ್ಲೆಲ್ಲ ಇದು ಬಹಳ ಯುಕ್ತಿಪೂರಿತವಾದುದು. ಉಳಿದ ಬೇರೆ ಸಿದ್ಧಾಂತಗಳು, ಅಸಂಪೂರ್ಣವಾದ ಅಲ್ಪವಾದ ಸಾಕಾರದ ದೇವರ ಭಾವ ಗಳೆಲ್ಲವೂ ಯುಕ್ತಿಪೂರಿತವಾಗಿಲ್ಲ. ಆದರೂ ಅದ್ವೈತದಲ್ಲಿ ಈ ಒಂದು ಮಹತ್ವವಿದೆ. ಅದೇ ಅಸಂಪೂರ್ಣವಾದ ದೇವರ ಭಾವಗಳೆಲ್ಲವನ್ನು ಅದು ಮಾನವನಿಗೆ ಉಪ ಯೋಗಕಾರಿ ಎಂದು ತಿಳಿದು ಎಲ್ಲವನ್ನು ಇದು ಸೇರಿಸಿಕೊಳ್ಳುವುದು. ಕೆಲವರು ಈ ಸಾಕಾರ ವಿವರಣೆಯನ್ನು ಅಯುಕ್ತವಾದುದೆನ್ನುವರು. ಆದರೆ ಇದು ಸಮಾ ಧಾನವನ್ನು ಕೊಡುವುದು. ಅವರಿಗೆ ಸಮಾಧಾನ ದಾಯಕವಾದ ಒಂದು ಧರ್ಮ ಬೇಕಾಗಿದೆ. ಅವರಿಗೆ ಇದು ಅತ್ಯಾವಶ್ಯಕವೆನ್ನುವುದು ನಮಗೆ ತಿಳಿಯುತ್ತದೆ. ಸತ್ಯದ ಪೂರ್ಣ ಜ್ಯೋತಿಯನ್ನು ತಡೆಯುವವರು ಅಲ್ಪ ಮಂದಿ. ಅದರಂತೆ ಬಾಳುವವರು ಮತ್ತೂ ಅಲ್ಪಮಂದಿ. ಆದಕಾರಣ ಇಂತಹ ಸಮಾಧಾನವನ್ನು ಕೊಡುವಂತಹ ಧರ್ಮವಿರುವುದು ಅತ್ಯಾವಶ್ಯಕ. ಅನೇಕ ಜೀವಿಗಳನ್ನು ಇದು ಉತ್ತಮರನ್ನಾಗಿ ಮಾಡುತ್ತದೆ. ಯಾರ ಆಲೋಚನಾ ಕ್ಷೇತ್ರ ಅತಿ ಕಿರಿದಾಗಿರು ವುದೋ, ಅವುಗಳನ್ನು ಕಟ್ಟಲು ಅಲ್ಪಸಾಮಗ್ರಿ ಸಾಕೋ, ಅಂತಹ ಸಂಕುಚಿತ ಬುದ್ಧಿವಂತರು ಆಲೋಚನಾ ಕ್ಷೇತ್ರದಲ್ಲಿ ಅಂತರಕ್ಷಕ್ಕೆ ಹಾರಲು ಸಾಹಸಪಡ ಲಾರರು. ಅವರ ಭಾವನೆಗಳು ಸಣ್ಣ ಸಣ್ಣ ದೇವತೆಗಳದು ಆಗಲಿ, ವಿಗ್ರಹಾದಿ ಬಾಹ್ಯ ಚಿಹ್ನೆಗಳದು ಆಗಲೀ, ಎಲ್ಲವೂ ಬಹಳ ಒಳ್ಳೆಯದು ಮತ್ತು ಅವರಿಗೆ ಬಹಳ ಸಹಾಯವಾಗಿರುವುದು. ಆದರೆ ನೀವು ನಿರಾಕಾರವನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ಏಕೆಂದರೆ ಅದರಿಂದ ಮತ್ತು ಅದರ ಮೂಲಕ ಮಾತ್ರ ಉಳಿದವುಗಳನ್ನು ವಿವರಿಸಬಹುದು. ಉದಾಹರಣೆಗೆ ಸಾಕಾರ ದೇವರನ್ನು ತೆಗೆದುಕೊಳ್ಳಿ. ನಿರಾಕಾರ ದೇವರಲ್ಲಿ ನಂಬುವ ಜಾನ್‌ಸ್ಟುಯರ್ಟ್ ಮಿಲ್ಲನು, ಸಾಕಾರ ದೇವರು ಅಸಾಧ್ಯ ಮತ್ತು ಅದನ್ನು ನಾವು ಪರೀಕ್ಷೆಮಾಡುವುದಕ್ಕೆ ಆಗುವುದಿಲ್ಲವೆನ್ನಬಹುದು. ಸಾಕಾರ ದೇವರನ್ನು ತೋರಿಸುವುದಕ್ಕೆ ಆಗುವುದಿಲ್ಲ ವೆಂದು ನಾನು ಅವನೊಂದಿಗೆ ಒಪ್ಪುತ್ತೇನೆ. ಆದರೆ ಮಾನವನ ಬುದ್ಧಿಯ ಮೂಲಕ ಸಿಕ್ಕುವ ನಿರಾಕಾರದ ಅತ್ಯುತ್ತಮ ಪ್ರತಿಬಿಂಬ ಸಾಕಾರ. ನಿರಾಕಾರ ಪರಬ್ರಹ್ಮನ ಭಿನ್ನ ದೃಷ್ಟಿಗಳಲ್ಲದೆ ಪ್ರಪಂಚ ಮತ್ತೇನು? ಅದು ನಮ್ಮೆದುರಿಗೆ ಇರುವ ಒಂದು ಪುಸ್ತಕದಂತೆ. ಪ್ರತಿಯೊಬ್ಬನೂ ಅದನ್ನು ಓದುವುದಕ್ಕೆ ತಮ್ಮ

ಬುದ್ಧಿಯನ್ನು ತಂದಿರುವರು. ಪ್ರತಿಯೊಬ್ಬರೂ ಅವನ್ನು ತಾವೆ ಓದಿಕೊಳ್ಳಬೇಕು. ಪ್ರತಿಯೊಬ್ಬರ ತಿಳಿವಳಿಕೆಯಲ್ಲಿಯೂ ಸರ್ವಸಾಮಾನ್ಯವಾದ ಕೆಲವು ವಿಷಯಗಳಿವೆ. ಆದಕಾರಣ ಕೆಲವು ವಿಷಯಗಳು ಮಾನವನ ಬುದ್ಧಿಗೆ ಒಂದೇ ಸಮನಾಗಿರುವಂತೆ ತೋರುವುದು. ನಾನು ಮತ್ತು ನೀವಿಬ್ಬರೂ ಒಂದು ಕುರ್ಚಿಯನ್ನು ನೋಡುವುದು ನಮ್ಮಿಬ್ಬರ ಮನಸ್ಸಿಗೂ ಒಂದು ಸಾಮಾನ್ಯವಾದ ವಸ್ತುವಿದೆ ಎಂಬುದಕ್ಕೆ ಪ್ರಮಾಣ. ಬೇರೊಂದು ಇಂದ್ರಿಯ ಕೂಡಿದ ಮತ್ತೊಬ್ಬನು ಬಂದ ಎಂದು ಇಟ್ಟುಕೊಳ್ಳೋಣ; ಅವನಿಗೆ ಕುರ್ಚಿ ಕಾಣಿಸುವುದೇ ಇಲ್ಲ. ಆದರೆ ಒಂದೇ ಸಮನಾದ ಉಳಿದ ಎಲ್ಲಾ ಮನಸ್ಸುಗಳೂ ಒಂದೇ ವಸ್ತುವನ್ನು ನೋಡುವುವು. ಆದಕಾರಣ ಈ ಪ್ರಪಂಚವೇ ಏಕವಾದ ಬ್ರಹ್ಮ. ಅವಿಕಾರಿಯಾದದ್ದು, ಅವ್ಯಕ್ತವಾದದ್ದು. ವ್ಯಕ್ತವಾದುದೆಲ್ಲ ಅದರ ಭಿನ್ನ ದೃಷ್ಟಿಗಳು. ವ್ಯಕ್ತವಾದ ಎಲ್ಲವೂ ಮಿತವಾದುದೆಂದು ನಿಮಗೆ ಮೊದಲೇ ತಿಳಿಯುವುದು. ನಾವು ಮಾಡುವ ಆಲೋಚಿಸುವ ಮತ್ತು ಅನುಭವಿಸುವ ಸಾಕಾರ ದೇವರೂ ಕೂಡ ವ್ಯಕ್ತವಾದದ್ದು. ಕಾರ್ಯಕಾರಣಸಂಬಂಧದ ಭಾವವಿರುವುದೇ ವ್ಯಕ್ತ ಜಗತ್ತಿನಲ್ಲಿ. ಸೃಷ್ಟಿಕರ್ತನಾದ ದೇವರನ್ನು ಸಾಂತವಾಗಿಯೇ ನಾವು ಸಾಧಾರಣವಾಗಿ ಆಲೋಚಿಸಬೇಕಾಗುತ್ತದೆ. ಆದರೂ ಕೂಡ ಅವನು ನಿರಾಕಾರವಾದ ಅನಂತವಾದ ಬ್ರಹ್ಮವೆ. ನಾವು ನೋಡಿದ ಈ ಪ್ರಪಂಚವನ್ನೇ ನಮ್ಮ ಬುದ್ಧಿಯಿಂದ ಗ್ರಹಿಸಿದರೆ ನಿರಾಕಾರ ಬ್ರಹ್ಮ. ಪ್ರಪಂಚದಲ್ಲಿ ಯಾವುದು ಸತ್ಯವೋ ಅದೇ ಆ ನಿರಾಕಾರ ಬ್ರಹ್ಮ. ಆಕಾರ ಮತ್ತು ಕಲ್ಪನೆಗಳೆಲ್ಲ ನಮ್ಮ ಬುದ್ಧಿಯಿಂದ ಅವಕ್ಕೆ ಬಂದಿವೆ. ಈ ಮೇಜಿನಲ್ಲಿ ಯಾವುದು ಸತ್ಯವಾಗಿದೆಯೋ ಅದೇ ಆ ಸತ್ತು. ಮೇಲಿನ ಮತ್ತು ಉಳಿದ ಆಕಾರಗಳೆಲ್ಲ ನಮ್ಮ ಬುದ್ಧಿಯಿಂದ ಅದಕ್ಕೆ ಕೊಡಲ್ಪಟ್ಟಿವೆ.

ಈಗ ಉದಾಹರಣೆಗೆ ವ್ಯಕ್ತ ವಸ್ತುವಿನ ವಿಶೇಷಣವಾದ ಚಲನೆಯನ್ನು ಅವ್ಯಕ್ತಕ್ಕೆ ಹೋಲಿಸುವುದಕ್ಕೆ ಆಗುವುದಿಲ್ಲ. ಪ್ರಪಂಚದಲ್ಲಿರುವ ಪ್ರತಿಯೊಂದು ಚೂರೂ ಕೂಡ, ಪ್ರತಿಯೊಂದು ಕಣ ಕೂಡ ಅನವರತವೂ ಚಲಿಸುತ್ತಿದೆ, ವಿಕಾರವಾಗುತ್ತಿದೆ. ಆದರೆ ಒಟ್ಟಿನಲ್ಲಿ ವಿಶ್ವ ಅವಿಕಾರಿಯಾದುದು. ಏಕೆಂದರೆ ಚಲನೆ ಅಥವಾ ವಿಕಾರ ಸಾಂಬಂಧಿಕ ವಸ್ತು. ಚಲಿಸದೇ ಇರುವ ಮತ್ತಾವುದಾದರೊಂದು ವಸ್ತುವಿಗೆ ಹೋಲಿಸಿದಾಗ ಮಾತ್ರ ಮತ್ತೊಂದು ವಸ್ತು ಚಲಿಸುತ್ತದೆ ಎಂದು ಆಲೋಚಿಸಬಹುದು. ಚಲನೆಯನ್ನು ಹೇಳಬೇಕಾದರೆ ಎರಡು ವಸ್ತುಗಳು ಇರಬೇಕು. ಇಡೀ ವಿಶ್ವವನ್ನೇ ನಾವು ತೆಗೆದುಕೊಂಡರೆ ಅದು ಚಲಿಸಲಾರದು, ಯಾವುದರೊಂದಿಗೆ ಅದು ಚಲಿಸುವುದು? ಅದು ವಿಕಾರಿ

ಯಾಗುತ್ತದೆ ಎಂದು ಹೇಳಲಾಗುವುದಿಲ್ಲ. ಯಾವುದರೊಂದಿಗೆ ಹೋಲಿಸಿದಾಗ ಅದು ಬದಲಾಯಿಸುವುದು? ಆದಕಾರಣ ಪೂರ್ಣವೇ ಬ್ರಹ್ಮ. ಆದರೆ ಅದರಂತ ರಾಳದಲ್ಲಿ ಪ್ರತಿಯೊಂದು ಕಣ ಕೂಡ ನಿರಂತರ ಪ್ರವಾಹದಲ್ಲಿರುವುದು, ಬದಲಾಯಿಸುತ್ತಿರುವುದು. ಅದು ಏಕ ವೇಳೆಯಲ್ಲಿ ವಿಕಾರಿಯಾದುದು ಮತ್ತು ಅವಿಕಾರಿಯಾದುದು. ಒಂದರಲ್ಲೆ ನಿರಾಕಾರ ಮತ್ತು ಸಾಕಾರ ಆಗಿರುವುದು. ಸೃಷ್ಟಿ, ಚಲನೆ, ದೇವರು, ಎಂಬ ನಮ್ಮ ಭಾವನೆಯೆ ಇದು. "ತತ್ವಮಸಿ" ಎಂಬುದರ ಅರ್ಥವೇ ಇದು. ನಿರಾಕಾರ ಸಾಕಾರವನ್ನು ವಿರೋಧಿಸುವ ಬದಲು ಅದನ್ನು ವಿವರಿಸುತ್ತದೆ. ಏಕ ಅನಂತವನ್ನು ಅಲ್ಲಗಳೆಯುವ ಬದಲು ಯುಕ್ತಿ ಮತ್ತು ಭಾವಗಳನ್ನು ಪೂರ್ತಿಗೊಳಿಸುವಂತೆ ವಿವರಿಸುವುದನ್ನು ನಾವು ನೋಡುತ್ತೇವೆ. ಪ್ರಪಂಚದಲ್ಲಿರುವ ಸಾಕಾರ ದೇವರು ಮತ್ತು ಇನ್ನು ಉಳಿದವುಗಳೆಲ್ಲವೂ ಕೂಡ ನಮ್ಮ ಮನಸ್ಸಿನ ಮೂಲಕ ನಿರಾಕಾರ ಬ್ರಹ್ಮವೆ. ನಮ್ಮ ಮನಸ್ಸನ್ನು ಮೀರಿಹೋದ ಮೇಲೆ, ನಮ್ಮ ಕ್ಷುದ್ರ ವ್ಯಕ್ತಿತ್ವ ಅಳಿಸಿಹೋದ ಮೇಲೆ ನಾವು ಆಗ ಬ್ರಹ್ಮನೊಂದಿಗೆ ಒಂದಾಗುವೆವು. "ತತ್ವಮಸಿ" ಎಂಬುದರ ಅರ್ಥವೆ ಇದು. ಏಕೆಂದರೆ ನಮ್ಮ ನಿಜ ಸ್ವರೂಪವನ್ನು ಅನಂತತೆಯನ್ನು ನಾವು ತಿಳಿದುಕೊಳ್ಳಬೇಕು.

ಅಂತವುಳ್ಳ ವ್ಯಕ್ತವಾದ ಮನುಷ್ಯನು, ತಾನು ಎಲ್ಲಿಂದ ಬಂದೆ ಎಂಬುದನ್ನು ಮರೆತು, ತಾನು ದೇವರಿಂದ ಸಂಪೂರ್ಣ ಬೇರೆ ಎಂದು ತಿಳಿಯುವನು. ವ್ಯಕ್ತರೂಪಧಾರಣೆ ಮಾಡಿದ ನಾವು, ವಿಭಿನ್ನವಾದ ನಾವು, ನಮ್ಮ ನಿಜತ್ವವನ್ನು ಮರೆಯುವೆವು. ಈ ಬಿನ್ನತೆಗಳನ್ನು ತೊರೆದು ಬಿಡಬೇಕೆಂದು ಅದ್ವೈತಿಗಳು ಹೇಳುವುದಿಲ್ಲ. ಆದರೆ ಭಿನ್ನತೆಗಳೇನೆಂಬುದನ್ನು ನಾವು ತಿಳಿದುಕೊಳ್ಳಬೇಕು. ನಿಜವಾಗಿಯೂ ನಾವು ಅನಂತಬ್ರಹ್ಮ. ನಮ್ಮ ಅನೇಕ ವ್ಯಕ್ತಿತ್ವಗಳು, ಆ ಅದ್ವಿತೀಯವಾದ ಸತ್ಯ ಪ್ರಕಾಶಿಸುತ್ತಿರುವ ಅನೇಕ ಮಾರ್ಗಗಳಾಗಿವೆ. ನಾವು ವಿಕಾಸವೆಂದು ಕರೆಯುವ ಈ ಬದಲಾವಣೆಗಳ ಮೊತ್ತವು, ಆತ್ಮ, ಹೆಚ್ಚು ಹೆಚ್ಚಾಗಿ ತನ್ನ ಅನಂತ ಶಕ್ತಿಯನ್ನು ಹೊರಪಡಿಸುವುದರಿಂದ ಬಂದಿದೆ. ನಾವು ಈ ಅನಂತತೆಯ ಕಡಲಿನ ಮಧ್ಯದಲ್ಲಿ ಎಲ್ಲಿಯೂ ನಿಲ್ಲುವುದಕ್ಕೆ ಆಗುವುದಿಲ್ಲ. ನಮ್ಮಲ್ಲಿರುವ ಸಚ್ಚಿದಾನಂದವು ಅನಂತವಾಗದೆ ಇರದು. ಅನಂತ ಶಕ್ತಿ, ಅನಂತ ಅಸ್ತಿತ್ವ, ಆನಂದಗಳು ನಮ್ಮವು. ಅವನ್ನು ನಾವು ಗಳಿಸಬೇಕಾಗಿಲ್ಲ, ಅವು ನಮ್ಮ ಸ್ವಂತ ವಸ್ತುಗಳು. ಅವನ್ನು ನಾವು ಪ್ರಕಾಶಿಸಬೇಕಷ್ಟೆ.

ತಿಳಿದುಕೊಳ್ಳುವುದಕ್ಕೆ ಅತಿ ಕಷ್ಟಸಾಧ್ಯವಾದ, ಅದ್ವೈತದ ಮುಖ್ಯಭಾವನೆ ಇದು. ನನ್ನ ಬಾಲ್ಯದಿಂದಲೂ ಸುತ್ತಲಿರುವ ನಿರ್ಬಲತೆಯನ್ನು ಬೋಧಿಸಿರುವರು.

ನಾನು ಹುಟ್ಟಿದಾಗಿನಿಂದಲೂ ನನ್ನನ್ನು ಒಬ್ಬ ಅಬಲನೆಂದು ಹೇಳಿರುವರು. ಸದ್ಯದಲ್ಲಿ ನನ್ನ ಶಕ್ತಿಯನ್ನು ನಾನು ತಿಳಿದುಕೊಳ್ಳುವುದು ಅತಿ ಕಷ್ಟವಾಗಿದೆ. ಆದರೆ ವಿಭಜನೆಯಿಂದ, ವಿಚಾರದಿಂದ, ನನ್ನ ಸ್ವಂತ ಶಕ್ತಿಯ ಜ್ಞಾನ ನನಗೆ ಬರುವುದು. ಅನುಭವದಿಂದ ನಾನದನ್ನು ತಿಳಿದುಕೊಳ್ಳುತ್ತೇನೆ. ಪ್ರಪಂಚ ದಲ್ಲಿರುವ ಜ್ಞಾನವೆಲ್ಲ ಎಲ್ಲಿಂದ ಬಂದಿತು? ಅದು ನಮ್ಮಲ್ಲಿಯೇ ಇತ್ತು. ಯಾವ ಜ್ಞಾನ ಹೊರಗೆ ಇತ್ತು? ಯಾವುದೂ ಇಲ್ಲ. ಜ್ಞಾನ ಜಡ ವಸ್ತುವಿನಲ್ಲಿ ಇರಲಿಲ್ಲ. ಸರ್ವ ಕಾಲದಲ್ಲಿಯೂ ಅದು ಮಾನವನಲ್ಲಿತ್ತು. ಯಾರೂ ಎಂದಿಗೂ ಜ್ಞಾನವನ್ನು ಸೃಷ್ಟಿಸಲಿಲ್ಲ. ಮಾನವನು ತನ್ನ ಅಂತರಂಗದಿಂದಲೇ ಅದನ್ನು ತರುವನು. ಅದು ಅಲ್ಲಿಯೇ ಇರುವುದು. ಅನೇಕ ಎಕರೆಗಳಲ್ಲಿ ಹಬ್ಬಿರುವ ಆ ದೊಡ್ಡದೊಂದು ಆಲದ ಮರ ಬಹುಶಃ ಸಾಸುವೆ ಕಾಳಿನ ಎಂಟನೇ ಒಂದು ಭಾಗದಷ್ಟು ಕೂಡ ದೊಡ್ಡದಾಗಿಲ್ಲದ ಅದರ ಸಣ್ಣ ಬೀಜದಲ್ಲಿತ್ತು. ಆ ಶಕ್ತಿಯ ಮೊತ್ತವೆಲ್ಲ ಅಲ್ಲಿ ಅಡಗಿತ್ತು. ಪ್ರಚಂಡ ಮೇಧಾಶಕ್ತಿ ಜೀವಾಣುವಿನಲ್ಲಿ ಸುಪ್ತ ವಾಗಿರುವುದು ನಮಗೆ ಗೊತ್ತಿದೆ. ಅನಂತ ಶಕ್ತಿ ಏಕೆ ಅಲ್ಲಿ ಇರಬಾರದು? ಅದು ಹಾಗಿರುವುದೆಂದು ನಮಗೆ ಗೊತ್ತಿದೆ. ಆ ಸತ್ಯವಿರೋಧಾಭಾಸದಂತೆ ನಮಗೆ ತೋರಬಹುದು. ಆದರೆ ಅದು ಸತ್ಯ. ನಾವೆಲ್ಲರೂ ಜೀವಾಣುವಿನಿಂದ ಬಂದಿರುವೆವು. ಈಗ ನಮ್ಮಲ್ಲಿರುವ ಎಲ್ಲಾ ಶಕ್ತಿಯೂ ಅಲ್ಲಿ ಸುಪ್ತವಾಗಿರು ವುದು. ಅದೆಲ್ಲ ಆಹಾರದಿಂದ ಬಂದಿತೆಂದು ಹೇಳಲಾಗುವುದಿಲ್ಲ. ಆಹಾರವನ್ನು ನೀವು ಬೆಟ್ಟದಂತೆ ರಾಶಿಹಾಕಿದರೆ ಏನು ಶಕ್ತಿ ಉದ್ಭವಿಸುತ್ತದೆ? ಶಕ್ತಿ ಸುಪ್ತ ರೀತಿಯಲ್ಲಿ ಸಂಶಯವಿಲ್ಲದೆ ಇತ್ತು. ಆದರೂ ಅಲ್ಲಿ ಶಕ್ತಿ ಇತ್ತು. ಅದರಂತೆಯೆ ಮಾನವನಿಗೆ ತಿಳಿಯಲಿ ತಿಳಿಯದೆ ಇರಲಿ ಅನಂತ ಶಕ್ತಿ ಅವನಾತ್ಮನಲ್ಲಿತ್ತು. ಅದರ ಅರಿವು ನಮಗೆ ಆದಾಗ ಅದು ಜಾಗ್ರತವಾಗುವುದು. ನಿಧಾನವಾಗಿ ಈ ಅನಂತ ಮಹಾಮಹಿಮ ಸುಜಾಗ್ರತನಾಗಿ, ತನ್ನ ಶಕ್ತಿಯ ಪರಿಚಯಹೊಂದಿ ಮೇಲೇಳುವಂತೆ ಕಾಣುತ್ತಿರುವುದು. ಅವನ ಪ್ರಜ್ಞೆ ವಿಶಾಲವಾಗುತ್ತ ಆಗುತ್ತ ಅವನ ಬಂಧನಗಳು ಹೆಚ್ಚು ಹೆಚ್ಚು ಸಡಿಲವಾಗುತ್ತಿವೆ. ಸರಪಣಿಗಳು ಮುರಿಯುತ್ತಿವೆ. ತನ್ನ ಅನಂತ ಶಕ್ತಿಯ ಅನಂತ ಜ್ಞಾನದ ಪೂರ್ಣ ಪರಿಚಯ ವಾಗಿ ತನ್ನ ಕಾಲಮೇಲೆ ಧೈರ್ಯದಿಂದ ನಿಲ್ಲುವ ದಿನ ಬರುವುದು ನಿಜ. ಅಂತಹ ಪವಿತ್ರವಾದ ಗುರಿ ಎಡಗೆ ಎಲ್ಲರೂ ಬೇಗ ಹೋಗಲು ನಾವುಗಳೆಲ್ಲರೂ ಸಹಾಯ ಮಾಡೋಣ.

## ಅಧ್ಯಾಯ ೪

ಇದುವರೆಗೂ ನಾವು ಸಮಷ್ಟಿಯನ್ನು ಗಮನಿಸುತ್ತಿದ್ದೆವು. ಇಂದು ವ್ಯಷ್ಟಿಗೂ ಸಮಷ್ಟಿಗೂ ವೇದಾಂತದ ರೀತಿ ಇರುವ ಸಂಬಂಧವನ್ನು ನಿಮ್ಮ ಮುಂದಿಡಲು ಪ್ರಯತ್ನಿಸುವೆನು. ನಾವು ನೋಡಿದಂತೆ ದ್ವೈತ ಸಿದ್ಧಾಂತದ ಪ್ರಕಾರ ಮೊದಮೊದಲು ಪ್ರತಿಯೊಂದು ಜೀವರಿಗೂ ಸ್ಪಷ್ಟವಾಗಿ ನಿರ್ದೇಶಿಸಿದ, ಮಿತವಾದ, ಪ್ರತ್ಯೇಕವಾದ ಒಂದು ಆತ್ಮವಿದ್ದಿತು. ಪ್ರತಿವ್ಯಕ್ತಿಯಲ್ಲಿಯೂ ಇರುವ ಪ್ರತ್ಯೇಕವಾದ ಆತ್ಮನ ವಿಚಾರವಾಗಿ ಹಲವು ಸಿದ್ಧಾಂತಗಳಿವೆ. ಆದರೆ ಮುಖ್ಯವಾದ ಚರ್ಚೆ ಹಳೆಯ ವೇದಾಂತಿಗಳಿಗೂ, ಹಳೆಯ ಬೌದ್ಧರಿಗೂ ನಡೆಯುತ್ತಿತ್ತು. ವೇದಾಂತಿಗಳು ಮತ್ತಾವುದರ ಸಂಪರ್ಕವೂ ಇಲ್ಲದೆ ಇರುವ ಪ್ರತ್ಯೇಕ ಆತ್ಮನಲ್ಲಿ ನಂಬುತ್ತಿದ್ದರು. ಬೌದ್ಧರು ಅಂತಹ ಪ್ರತ್ಯೇಕ ಆತ್ಮನ ಅಸ್ತಿತ್ವ ವನ್ನು ಸಂಪೂರ್ಣ ವಿರೋಧಿಸುತ್ತಿದ್ದರು. ನಾನು ನಿಮಗೆ ಹಿಂದೆ ಹೇಳಿದಂತೆ ಯೂರೋಪಿನಲ್ಲಿ ನಿಮ್ಮಲ್ಲಿರುವ ಗುಣ ಮತ್ತು ಗುಣಿಗಳ ಚರ್ಚೆಯಂತೆ ಇದೆ ಇದು. ಒಂದು ಪಕ್ಷದವರು ಗುಣಗಳ ಹಿಂದೆ ಗುಣಿ ಎಂಬುದೊಂದು ಇದೆ, ಇದರಲ್ಲಿ ಗುಣವೆಲ್ಲ ಅಂತರ್ಗತವಾಗಿವೆ ಎಂತಲೂ, ಮತ್ತೊಂದು ಪಕ್ಷದವರು, ಅಂತಹ ಗುಣಿ ಇಲ್ಲವೆಂದೂ, ಅದು ಅನಾವಶ್ಯಕವೆಂದೂ, ಗುಣಗಳು ತಮಗೆ ತಾವೆ ಇರಬಹುದೆಂದು ವಾದಿಸುತ್ತಿದ್ದರು: ಆತ್ಮನ ವಿಚಾರವಾಗಿ ಬಹಳ ಪುರಾತನ ಸಿದ್ಧಾಂತ ತದಾತ್ಮ್ಯದ ವಾದದಮೇಲೆ ನಿಂತಿರುವುದು. "ನಾನೆ ನಾನು". ನೆನ್ನೆಯ ನಾನೆ ಇಂದಿನ ನಾನು. ಇಂದಿನ ನಾನೆ ನಾಳೆಯ ನಾನಾಗುವುದು. "ನೆನ್ನೆಯ ದೇಹ ಎಷ್ಟೇ ಬದಲಾವಣೆಯಾಗುತ್ತಿದ್ದರೂ, ಹಿಂದಿನ ನಾನೆ ಇಂದಿನ ನಾನು ಎಂದು ನಂಬುತ್ತೇನೆ. ಮಿತವಾದ ಆದರೂ ಸಂಪೂರ್ಣವಾದ ಪ್ರತ್ಯೇಕ ಆತ್ಮನಲ್ಲಿ ನಂಬಿದವರ ಮುಖ್ಯವಾದ ವಾದ ಇದು ಎಂದು ಕಾಣುತ್ತದೆ.

ಆದರೆ ಪ್ರಾಚೀನ ಬೌದ್ಧರಾದರೋ ಇಂತಹ ಊಹೆ ಅನಾವಶ್ಯಕವಾದು ದೆಂದು ಸಾರಿದರು. ತಮಗೆ ತಿಳಿದಿರುವುದೆಲ್ಲ ಮತ್ತು ಮುಂದೆ ತಿಳಿಯಬಹು ದಾದುದೆಲ್ಲ ಈ ಬದಲಾವಣೆಗಳು ಮಾತ್ರ ಎಂಬ ವಾದವನ್ನು ತಂದರು. ವಿಕಾರಿ ಯಾಗದ ಮತ್ತು ಅವಿಕಾರಿಯಾದ ಒಂದು ಗುಣವನ್ನು ಊಹಿಸುವುದು ನಿಷ್ಪ್ರ ಯೋಜನ. ಅಂತಹ ಒಂದು ವಿಕಾರವಾಗದ ವಸ್ತು ಒಂದುವೇಳೆ ಇದ್ದರೂ, ಅದನ್ನು ನಾವು ತಿಳಿಯಲಾರೆವು. ಅದರ ವಿಚಾರದಲ್ಲಿ ಯಾವುದನ್ನು ಗ್ರಹಿಸು ವುದಕ್ಕೂ ನಮಗೆ ಸಾಧ್ಯವಿಲ್ಲ. ಸಧ್ಯದಲ್ಲಿ ಯೂರೋಪಿನಲ್ಲಿ ಅಂತಹ ಚರ್ಚೆಯೇ

ಒಂದು ಪಕ್ಷದಲ್ಲಿ ಧರ್ಮಾಭಿಮಾನಿಗಳು ಮತ್ತು ಭಾವನೆಯು ಸತ್ಯವೆನ್ನುವವರಿಗೂ ಮತ್ತು ಇನ್ನೊಂದು ಪಕ್ಷದಲ್ಲಿ ಅಸ್ತಿವಾದಿಗಳಿಗೂ ಅಜ್ಞೇಯವಾದಿಗಳಿಗೂ ನಡೆಯುತ್ತಿರುವುದು. ಒಂದು ಪಕ್ಷದವರು ಬದಲಾವಣೆಯಾಗದ ಯಾವುದೋ ಒಂದು ವಸ್ತು ಹಿಂದೆ ಇದೆ ಎಂದೂ, ಅವರ ಇತ್ತೀಚಿನ ಪ್ರತಿನಿಧಿ ಹರಬರ್ಟ್ ಸ್ಪೆನ್ಸರ್ ಮತ್ತು ಫ್ರೆಡರಿಕ್‌ಹ್ಯಾರಿಸ್‌ನ್ ಇವರಿಬ್ಬರಿಗೂ ನಡೆದ ಸ್ಪರ್ಧೆಯಲ್ಲಿ ನಿಮ್ಮಲ್ಲಿ ಕುತೂಹಲಗಳಾಗಿದ್ದವರು ಅದು ಆ ಹಳೆಯವಾದವೆ ಎಂಬುದನ್ನು ಕಂಡುಹಿಡಿಯಬಹುದು. ಒಂದು ಪಕ್ಷದವರು ಬದಲಾಯಿಸುವ ಗುಣಗಳ ಹಿಂದೆ ಒಂದು ಬದಲಾಯಿಸದ ಗುಣಿ ಇದೆ ಎನ್ನುವರು. ಮತ್ತೊಂದು ಪಕ್ಷದವರು ಅಂತಹ ಊಹೆ ನಿರಾಧಾರವಾದುದು ಎನ್ನುವರು. ಒಂದು ಪಕ್ಷದವರು ಅವಿಕಾರಿಯಾದ ವಸ್ತುವಿನ ಗ್ರಹಣವಿಲ್ಲದೆ ವಿಕಾರವನ್ನು ನಾವು ಗ್ರಹಿಸಲಾರೆವೆನ್ನುವರು. ಮತ್ತೊಂದು ಪಕ್ಷದವರು ಅದು ಕೇವಲ ನಿರಾಧಾರವಾದುದೆಂದು ಹೇಳುವರು. ವಿಕಾರವಾದುದನ್ನು ಮಾತ್ರ ನಾವು ಗ್ರಹಿಸಲು ಸಾಧ್ಯ. ಅವಿಕಾರಿಯಾದುದನ್ನು ನಾವು ಗ್ರಹಿಸಲಾರೆವು ಅನುಭವಿಸಲಾರೆವು ಅಥವಾ ನೋಡಲಾರೆವು.

ಭರತ ಖಂಡದಲ್ಲಿ ಬಹಳ ಹಿಂದಿನ ಕಾಲದಲ್ಲಿ ಇದಕ್ಕೆ ಉತ್ತರ ಸಿಕ್ಕಲಿಲ್ಲ. ಏಕೆಂದರೆ ಗುಣಗಳ ಹಿಂದಿರುವ ಮತ್ತು ಗುಣಗಳಲ್ಲದ ಗುಣಿಯನ್ನು ಊಹಿಸುವುದು ಮತ್ತು ಅದನ್ನು ಸತ್ಯವೆಂದು ಸಾಧಿಸುವುದು ಅಸಾಧ್ಯ. ತದಾತ್ಮ್ಯ ದೃಷ್ಟಿಯಿಂದಲೂ, ಮತ್ತು ನೆನಪಿನ ಆಧಾರದಮೇಲಿರುವ ವಾದವಾದ—ನೆನ್ನೆಯ ನಾನೆ ಇಂದಿನ ನಾನು; ಏಕೆಂದರೆ ನನಗೆ ಅದು ಜ್ಞಾಪಕದಲ್ಲಿದೆ-ಆದಕಾರಣ ನಾನೊಂದು ಹಿಂದೆ ಮತ್ತು ಇಂದು ಇರುವ ವಸ್ತುವೆಂಬುದನ್ನು ಪ್ರಮಾಣ ಸಹಿತ ಶೃತ ಪಡಿಸುವುದಕ್ಕಾಗುವುದಿಲ್ಲ. ಸಾಧಾರಣವಾಗಿ ಅವರು ತರುವ ಮತ್ತೊಂದು ಕುತರ್ಕ ಕೇವಲ ಪದಗಳ ಆಡಂಬರ ಅಷ್ಟೆ. ಉದಾಹರಣೆಗೆ ಮುಂದೆ ಬರುವ ಅನೇಕ ವಾಕ್ಯಗಳನ್ನು ತೆಗೆದುಕೊಳ್ಳಬಹುದು. "ನಾನು ಮಾತನಾಡುತ್ತೇನೆ" "ನಾನು ಹೋಗುತ್ತೇನೆ" "ನಾನು ಕನಸು ಕಾಣುತ್ತೇನೆ" "ನಾನು ಮಲಗುತ್ತೇನೆ" "ನಾನು ಸಂಚರಿಸುತ್ತೇನೆ" ಇತ್ಯಾದಿ. ಇಲ್ಲಿ ಮಾಡುತ್ತೇನೆ, ಹೋಗುತ್ತೇನೆ, ಕನಸು ಕಾಣುತ್ತೇನೆ ಮುಂತಾದ ಕ್ರಿಯಾಪದಗಳು ಬದಲಾಯಿಸುತ್ತಿರುವುದನ್ನು ನೀವು ನೋಡಬಹುದು. ಆದರೆ ಬದಲಾವಣೆಯಾಗದ ಪದ ಯಾವುದೆಂದರೆ "ನಾನು" ಎಂಬುದು. ಆದಕಾರಣ ಅವರು "ನಾನು" ಎಂಬುದು ಅವಿಕಾರಿಯಾದು

ವೆಂದೂ, ಪ್ರತ್ಯೇಕವಾದುದೆಂದೂ, ವಿಕಾರವೆಲ್ಲ ದೇಹಕ್ಕೆ ಅನ್ವಯಿಸುವುದೆಂದೂ, ಹೇಳುತ್ತಾರೆ. ಈ ವಾದ ತೋರಿಕೆಗೆ ಬಹಳ ತೃಪ್ತಿಕರವಾಗಿ ಕಂಡರೂ, ಇದು ನಿಂತಿರುವುದು ಪದಗಳ ಅಪಾರ್ಥದಮೇಲೆ. ನಾನು ಮತ್ತು ಕಾಣುವುದು, ಹೋಗುವುದು ಮತ್ತು ಕನಸು ಬರವಣಿಗೆಯಲ್ಲಿ ಬೇರೆ ಬೇರೆಯಾಗಿ ಕಂಡರೂ, ಮನಸ್ಸಿನಲ್ಲಿ ಯೆಂದಿಗೂ ಅದನ್ನು ಬೇರ್ಪಡಿಸಲಾಗುವುದಿಲ್ಲ.

ನಾನು ಊಟಮಾಡುವಾಗ ನಾನೇ ಊಡಮಾಡುವಂತೆ ತಿಳಿಯುವೆನು. ನಾನು ಊಟಮಾಡುವ ಕ್ರಿಯೆಯೊಂದಿಗೆ ಸಾರೂಪ್ಯ (Identical) ಭಾವವನ್ನು ಹೊಂದುವೆನು. ನಾನು ಓಡುವಾಗ, ನಾನು ಮತ್ತು ಓಡುವುದು ಎಂಬ ಎರಡು ಬೇರೆ ಬೇರೆ ವಸ್ತುಗಳಿಲ್ಲ. ಆದಕಾರಣ ತದಾತ್ಮ್ಯೆಯ ವಾದ ಅಷ್ಟೇನು ಬಲವಾದಂತೆ ತೋರುವುದಿಲ್ಲ. ನೆನಪಿನಮೇಲೆ ನಿಂತಿರುವ ಮತ್ತೊಂದು ವಾದವೂ ಕೂಡ ಅಷ್ಟೇ ಜಳ್ಳು. ನೆನಪಿನ ಮೇಲೆ ಸಾರೂಪ್ಯವು ನಿಂತಿದ್ದರೆ, ನಾನು ಮರೆತ ಹಲವು ವಿಷಯಗಳು ಸಾರೂಪ್ಯದಿಂದ ಮಾಯವಾದಂತೆಯೆ.

ಗುಣಗಳ ಮೊತ್ತದಾಚೆ ಇರುವ ಯಾವುದೂ ನಮಗೆ ಗೊತ್ತಿಲ್ಲ ಮತ್ತು ಗೊತ್ತಾಗುವಂತೆಯೂ ಇಲ್ಲ ಎಂಬ ಹಿಂದಿನ ಬೌದ್ಧರ ವಾದ ಇದಕ್ಕಿಂತ ಉತ್ತಮವಾಗಿದೆ. ಅವರ ರೀತಿಯಲ್ಲಿ ಆತ್ಮವೆಂಬುದು ಸಂವೇದನೆ ಮತ್ತು ಭಾವಗಳ ಕಂತೆ. ಇಂತಹ ರಾಶಿಗೆ ನಾವು ಆತ್ಮವೆಂದು ಕರೆಯುವುದು. ಈ ರಾಶಿ ಅನವರತವೂ ಬದಲಾಯಿಸುತ್ತ ಇರುತ್ತದೆ.

ಅದ್ವೈತಿಯ ಆತ್ಮಸಿದ್ಧಾಂತವು ಎರಡು ಪಕ್ಷವನ್ನೂ ರಾಜಿಮಾಡಿಸುತ್ತದೆ. ಅದ್ವೈತಿಯ ದೃಷ್ಟಿ ಇದು : ಗುಣಗಳಿಂದ ಗುಣಿಯು ಬೇರೆ ಇದೆ ಎಂದು ಆಲೋಚನೆ ಮಾಡುವುದಕ್ಕೆ ನಮಗೆ ಆಗುವುದಿಲ್ಲವೆಂಬುದೇನೋ ನಿಜ. ವಿಕಾರ ಮತ್ತು ಅವಿಕಾರವನ್ನು ನಾವು ಏಕಕಾಲದಲ್ಲಿ ಆಲೋಚಿಸಲು ಸಾಧ್ಯವಿಲ್ಲ. ಆದರೆ ಯಾವುದು ಗುಣಿಯೋ ಅದೇ ಗುಣ. ಗುಣ ಮತ್ತು ಗುಣಿಯು ವಿಭಿನ್ನವಾದ ಎರಡು ವಸ್ತುಗಳಲ್ಲ. ಅವಿಕಾರವಾದುದೆ ವಿಕಾರವಾದಂತೆ ನಮಗೆ ತೋರುತ್ತಿರುವುದು. ಪ್ರಪಂಚದ ಅವಿಕಾರ ವಸ್ತುವು ವಿಕಾರವಸ್ತುವಿನಿಂದ ಬೇರೆಯಲ್ಲ. ಅವ್ಯಕ್ತ ವ್ಯಕ್ತಕ್ಕಿಂತ ಬೇರೆಯಲ್ಲ. ಆದರೆ ಅವ್ಯಕ್ತವೇ ವ್ಯಕ್ತವಾಗಿರುವುದು. ಅವಿಕಾರವಾದ ಆತ್ಮವೊಂದಿದೆ. ನಾವು ಯಾವುದನ್ನು ಗ್ರಹಣಶಕ್ತಿ ಮತ್ತು ಉದ್ವೇಗಶಕ್ತಿ ಎನ್ನುವೆವೋ, ಮತ್ತು ಅಷ್ಟುಮಾತ್ರವಲ್ಲ, ದೇಹವೂ ಕೂಡ ನಾವು ಬೇರೆ ದೃಷ್ಟಿಯಿಂದ ನೋಡಿದ ಆತ್ಮವೆ. ನಮಗೆ ದೇಹಗಳಿವೆ, ಆತ್ಮಗಳಿವೆ, ಎಂದು ಹೇಳುವ ಒಂದು ಅಭ್ಯಾಸ ನಮಗೆ ಬಂದಿರುವುದು. ಆದರೆ

ನಿಜವಾಗಿರುವುದು ಒಂದೇ ಒಂದು.

ನಾನು ದೇಹವೆಂದು ಭಾವಿಸಿದಾಗ, ನಾನು ದೇಹಮಾತ್ರ; ನಾನು ದೇಹವಲ್ಲದೆ ಬೇರೆ ಎಂದು ಹೇಳುವುದಕ್ಕೆ ಅರ್ಥವಿಲ್ಲ. ನಾನು ಆತ್ಮವೆಂದು ಆಲೋಚಿಸಿದಾಗ ದೇಹ ಬುದ್ಧಿ ಮಾಯವಾಗುತ್ತದೆ. ದೇಹದ ಅರಿವು ಉಳಿಯುವುದಿಲ್ಲ; ದೇಹದ ಭಾವನೆ ಮಾಯವಾಗುವವರೆಗೂ, ಯಾರಿಗೂ, ಆತ್ಮದ ಭಾವನೆ ಬರುವುದಿಲ್ಲ. ಗುಣಗಳ ಭಾವನೆ ಮಾಯವಾಗುವವರೆಗೂ ಯಾರಿಗೂ ಗುಣಿಯ ಭಾವನೆ ಬರುವುದಿಲ್ಲ

ಅದ್ವೈತ ವೇದಾಂತದ ರಜ್ಜು ಸರ್ಪ ಭ್ರಮೆಯ ಹಳೆಯ ಉದಾಹರಣೆಯು ವಿಷಯವನ್ನು ಮತ್ತೂ ಸ್ಪಷ್ಟಪಡಿಸುವುದು. ಮನುಷ್ಯನು ಹಗ್ಗವನ್ನು ಹಾವೆಂದು ಭ್ರಮಿಸಿದಾಗ ಹಗ್ಗ ಮಾಯವಾಗಿದೆ. ಅದನ್ನು ಹಗ್ಗವೆಂದು ತಿಳಿದಾಗ ಹಾವು ಮಾಯವಾಗಿದೆ. ಹಗ್ಗಮಾತ್ರ ಉಳಿಯುತ್ತದೆ. ಎರಡು ಮೂರು ವಸ್ತುಗಳು ಇವೆ ಎಂಬ ಭಾವನೆ ಅಪೂರ್ಣವಾದ ಮೂಲಸಿದ್ಧಾಂತಗಳ ಮೇಲೆ ನಿಂತು ಆಲೋಚಿಸುವುದರಮೂಲಕ ಬರುವುದು. ಇಂತಹ ಭಾವನೆಯನ್ನು ಗ್ರಂಥದಲ್ಲಿ ಓದುತ್ತೇವೆ, ಇಲ್ಲವೆ ಮತ್ತೊಬ್ಬರಿಂದ ಕೇಳಿ ನಮಗೆ ನಿಜವಾಗಿಯೂ ದೇಹ ಮತ್ತು ಆತ್ಮಗಳೆಂಬ ಎರಡು ವಸ್ತುಗಳಿವೆ ಎಂಬ ಮೋಹಕ್ಕೆ ಒಳಗಾಗುತ್ತೇವೆ. ಆದರೆ ಅಂತಹ ಭಾವನೆ ನಿಜವಾಗಿ ಎಂದಿಗೂ ಇಲ್ಲ. ನಮ್ಮ ಜ್ಞಾನ ದೇಹ ಅಥವಾ ಆತ್ಮನಲ್ಲಿ ಒಂದಾಗಿರುವುದು. ಇದನ್ನು ಸಿದ್ಧಾಂತ ಪಡಿಸುವುದಕ್ಕೆ ಯಾವ ಯುಕ್ತಿ ಪ್ರಮಾಣವೂ ಬೇಕಾಗಿಲ್ಲ. ನಮ್ಮ ಮನಸ್ಸಿನಲ್ಲೇ ಇದನ್ನು ಹೋಲಿಸಿ ನೋಡಬಹುದು.

ನಾನೊಂದು ನಿರ್ದೇಹನಾದ ವಸ್ತು ಎಂದು ಯೋಚಿಸಲು ಪ್ರಯತ್ನಪಟ್ಟು ನೋಡಿ. ಅದು ಅತ್ಯಂತ ಕಷ್ಟವೆಂಬುದು ನಿಮಗೆ ಗೊತ್ತಾಗುತ್ತದೆ. ಹೀಗೆ ಮಾಡುವುದರಲ್ಲಿ ಜಯಶೀಲರಾದ ಅಲ್ಪಮಂದಿಗೆ ತಾವು ಆತ್ಮವೆಂದು ತಿಳಿದಕಾಲದಲ್ಲಿ ಅವರಿಗೆ ದೇಹದ ಆಲೋಚನೆ ಇರುವುದಿಲ್ಲ. ಧೀರ್ಘಧ್ಯಾನ, ಇಂದ್ರಜಾಲ, ಸನ್ನಿ ಅಥವಾ ಕೆಲವು ಔಷಧಿಗಳ ಪ್ರಯೋಗಕ್ಕೆ ಒಳಪಟ್ಟಾಗ, ಕೆಲವು ವೇಳೆ ಅತಿ ವಿಚಿತ್ರವಾದ ಮಾನಸಿಕ ಸ್ಥಿತಿಯಲ್ಲಿರುವುದನ್ನು ನೀವು ಬಹುಶಃ ಕೇಳಿರಬಹುದು ಅಥವಾ ನೋಡಿರಬಹದು. ಅಂತರಂಗದಲ್ಲಿರುವ ಯಾವುದೋ ವಸ್ತುವನ್ನು ಅವರು ನೋಡುತ್ತಿದ್ದಾಗ ಬಾಹ್ಯವಸ್ತು ಅವರ ಪಾಲಿಗೆ ಮಾಯವಾಗಿತ್ತು ಎಂಬುದನ್ನು ಅವರ ಅನುಭವಗಳಿಂದ ತಿಳಿಯಬಹುದು. ಇರುವುದೆಲ್ಲ ಒಂದೇ ವಸ್ತು ಎಂಬುದನ್ನು ಇದು ತೋರುವುದು. ಆ ಏಕವೆ ಅನಂತ ರೂಪಿ

ನಲ್ಲಿ ಕಾಣುತ್ತಿರುವುದು. ಈ ಅನೇಕವೇ ಕಾರ್ಯಕಾರಣ ಸಂಬಂಧಕ್ಕೆ ಕಾರಣ. ಕಾರ್ಯಕಾರಣಗಳ ಸಂಬಂಧವು ವಿಕಾಸಕ್ಕೆ ಸೇರಿದುದು—ಒಂದು ಇನ್ನೊಂದಾಗುವುದು. ಕೆಲವುವೇಳೆ ಕಾರಣ ಮಾಯವಾದಂತೆ ತೋರಿ ಅದರ ಸ್ಥಳದಲ್ಲಿ ಕಾರ್ಯನಿಲ್ಲುವುದು. ಆತ್ಮ ದೇಹಕ್ಕೆ ಕಾರಣವಾದರೆ, ಆತ್ಮಸಧ್ಯಕ್ಕೆ ಮಾಯವಾದಂತೆ ತೋರಿ ದೇಹಮಾತ್ರ ನಿಲ್ಲುವುದು. ದೇಹ ಮಾಯವಾದಾಗ ಆತ್ಮ ನಿಲ್ಲುವುದು. ದೇಹ ಮತ್ತು ಆತ್ಮಗಳೆರಡನ್ನೂ ಊಹಿಸುವುದಕ್ಕೆ ವಿರೋಧ ವಾಗಿ ಹೂಡಿದ ಬೌದ್ಧರ ವಾದಸರಣಿಗೆ ಸರಿಯಾದ ಉತ್ತರವಾಗಿದೆ. ಈ ಸಿದ್ಧಾಂತ ದೇಹ, ಮತ್ತು ಆತ್ಮಗಳೆಂಬ ದ್ವೈತ ಭಾವವನ್ನು ನಿಶೇಧಿಸಿ, ಗುಣ ಮತ್ತು ಗುಣಿಗಳು ಒಂದೆ ಎಂದೂ, ನಾನಾರೂಪಗಳಲ್ಲಿ ಇದು ಕಾಣುತ್ತಿದೆ ಎಂದೂ ಇದು ತೋರುವುದು.

ಅವಿಕಾರವಾದ ಭಾವನೆಯನ್ನು ಪೂರ್ಣ ದೃಷ್ಟಿಯಿಂದ ಮಾತ್ರ ಸಿದ್ಧಾಂತ ಪಡಿಸಬಹುದೇ ಹೊರತು ಎಂದಿಗೂ ಅಂಶದೃಷ್ಟಿಯಿಂದ ಅಲ್ಲ ಎಂಬುದನ್ನು ನಾವಾಗಲೇ ನೋಡಿರುವೆವು. ಅಂಶದ ಭಾವನೆ ಬರುವುದೇ ಬದಲಾವಣೆ ಮತ್ತು ಚಲನೆಯ ಭಾವನೆಯಿಂದ. ಅಂತವುಳ್ಳ ಪ್ರತಿಯೊಂದು ವಸ್ತುವನ್ನು ನಾವು ತಿಳಿದುಕೊಳ್ಳಬಹುದು. ಏಕೆಂದರೆ ಅವು ವಿಕಾರವಾಗಬಲ್ಲದು. ಪೂರ್ಣ ವಾದದೊ ವಿಕಾರವಾಗದೆ ಇರಬೇಕು. ಏಕೆಂದರೆ ಇದಲ್ಲದೆ ಯಾವ ವಸ್ತು ವಿನ ಹೋಲಿಕೆಯಮೇಲೆ ಇದು ಬದಲಾಯಿಸುವುದಕ್ಕೆ ಸಾಧ್ಯವೋ ಅಂತಹ ವಸ್ತುವೇ ಇಲ್ಲ. ಬದಲಾವಣೆ ಯಾಗದೆ ಇರುವ ಅಥವಾ ಕಡಿಮೆ ಬದಲಾವಣೆ ಯಾಗುವ ವಸ್ತುವಿನೊಂದಿಗೆ ಹೋಲಿಸಿದಾಗ ಮಾತ್ರ ಬದಲಾವಣೆ ಸಾಧ್ಯ.

ಆದಕಾರಣ ಅದ್ವೈತ ದೃಷ್ಟಿಯಿಂದ ಆತ್ಮ ಸರ್ವವ್ಯಾಪಿಯಾದುದು, ಅವಿ ಕಾರಿಯಾದುದು ಮತ್ತು ಅಪಾರವಾದುದು ಎಂಬುದನ್ನು ಸಾಧ್ಯವಾದ ಮಟ್ಟಿಗೆ ತೋರಿಸಬಹುದು. ಕಷ್ಟವಿರುವುದು ಪ್ರತ್ಯೇಕವಾದುದಕ್ಕೆ ಮಾತ್ರ. ಆದರೆ ನಮ್ಮ ಮೇಲೆ ಅಷ್ಟೊಂದು ಅಧಿಕಾರವುಳ್ಳ, ಯಾವ ಸಿದ್ಧಾಂತದ ಮೂಲಕ ನಾವುಗಳೆಲ್ಲ ಹಾದು ಹೋಗಬೇಕೊ ಅಂತಹ, ಮಿತವಾದ ಪ್ರತ್ಯೇಕಾತ್ಮನಲ್ಲಿ ನಂಬಿಕೆ ಇದೆ. ಆ ಹಳೆಯ ದ್ವೈತ ಸಿದ್ಧಾಂತಗಳನ್ನು ನಾವು ಏನುಮಾಡೋಣ?

ಪೂರ್ಣದೊಂದಿಗೆ ಹೋಲಿಸಿದಾಗ ಮಾತ್ರ ನಾವು ಅಮರರು ಎಂಬು ದನ್ನು ನೋಡಿರುವೆವು. ಆದರೆ ಬರುವ ಕಷ್ಟವೇ ಇದು. ಅದೇ ನಾವು ಪೂರ್ಣದ ಭಾಗವಾಗಿ ಅಮರರಾಗಿರಲು ಆಶಿಸುತ್ತೇವೆ. ನಾವು ಅನಂತ, ಅದೇ ನಮ್ಮ ನಿಜವಾದ ಸ್ಥಿತಿ ಎಂಬುದನ್ನು ನೋಡಿರುವೆವು. ಆದರೆ ನಾವು ಈ

ಅಲ್ಪಾತ್ಮನನ್ನೇ ನಮ್ಮ ನೈಜ ಸ್ಥಿತಿಯನ್ನಾಗಿ ಮಾಡಲು ಬಯಸುವೆವು. ನಮ್ಮ ಅನುದಿನದ ಅನುಭವದಲ್ಲಿ ಈ ಅಲ್ಪಾತ್ಮಗಳೇ ಪ್ರತ್ಯೇಕವಾದುದು. ಆದರೆ ಅವು ಎಡಬಿಡದೆ ವಿಕಾರಹೊಂದುತ್ತಿರುವ ಆತ್ಮಗಳು ಎಂದು ನಮಗೆ ತಿಳಿದಾಗ ಅದರ ಪಾಡೇನಾಗುವುವು. ಅವು ಒಂದೇ ಆದರೂ ಒಂದೆಯಲ್ಲ. ನೆನ್ನೆಯ ನಾನೆ ಇಂದಿನ ನಾನು. ಆದರೂ ಅದು ಅಲ್ಲ. ಏಕೆಂದರೆ ಅದು ಸ್ವಲ್ಪ ಬದಲಾಯಿಸಿರುವುದು. ಈ ಬದಲಾವಣೆಯ ಅಂತರ್ರಾಳದಲ್ಲಿ ಬದಲಾಗದ ಒಂದು ವಸ್ತುವಿದೆ ಎಂಬ ದ್ವೈತ ಭಾವನೆಯಿಂದ ಪಾರಾಗಿ, ವಿಕಾಸವಾಗದ ಅತ್ಯಾಧುನಿಕ ಭಾವವನ್ನು ನಾವು ಸ್ವೀಕರಿಸಿದರೆ, "ನಾನು" ಎಂಬುದು ಅನುಗಾಲವು ವಿಕಾರವಾಗುತ್ತ ವಿಕಾಸವಾಗುತ್ತಿರುವ ವಸ್ತುವೆಂದು ತೋರುತ್ತದೆ.

ಮಾನವನು ಬಸವನ ಹುಳುವಿನಿಂದ ವಿಕಾಸವಾಗಿರುವುದು ಸತ್ಯವಾದರೆ, ಬಸವನ ಹುಳುವಿನ ವ್ಯಕ್ತಿತ್ವವೂ ಮಾನವನ ವ್ಯಕ್ತಿತ್ವವೂ ಒಂದೆ. ಆದರೆ ಬಸವನ ಹುಳು ಇನ್ನೂ ಹೆಚ್ಚು ವಿಕಾಸವಾಗಬೇಕು, ಅಷ್ಟೆ. ಬಸವನ ಹುಳುವಿನಿಂದ ಹಿಡಿದು ಮಾನವನನವರೆವಿಗೂ ಅನಂತತೆಯ ಕಡೆಗೆ ನಿರಂತರವಾಗಿ ಮಹಾ ವಿಕಾಸವಾಗಿದೆ. ಆದಕಾರಣ ಈ ಜೀವಾತ್ಮನನ್ನು ಅಖಂಡದ ಕಡೆಗೆ ಅನವರತವಾಗಿ, ವಿಕಾಸವಾಗುತ್ತಿರುವ ವ್ಯಕ್ತಿ ಎನ್ನಬಹುದು. ಅಖಂಡವನ್ನು ಸೇರಿದಾಗ ಮಾತ್ರ ಸಂಪೂರ್ಣ ವ್ಯಕ್ತಿತ್ವವನ್ನು ಪಡೆಯಬಹುದು. ಆದರೆ ಅಖಂಡಹ ಈ ಕಡೆಯಾದರೊ ಅದು ಸದಾ ವಿಕಾಸವಾಗುತ್ತಿರುವ, ಅಭಿವೃದ್ಧಿಯಾಗುತ್ತಿರುವ ವ್ಯಕ್ತಿ. ಅದ್ವೈತಸಿದ್ಧಾಂತದ ಒಂದು ಅಪೂರ್ವವಾದ ಮುಖ್ಯ ಲಕ್ಷಣವೇ ಹಿಂದಿನ ಸಿದ್ಧಾಂತಗಳೆಲ್ಲವನ್ನು ಸಮನ್ವಯ ಮಾಡುವುದು. ಹಲವು ವೇಳೆ ಇದು ತತ್ತ್ವಕ್ಕೆ ಬಹಳ ಸಹಾಯ ಮಾಡಿದೆ. ಕೆಲವು ವೇಳೆ ಅದಕ್ಕೆ ಕುಂದನ್ನೂ ತಂದಿದೆ. ನಮ್ಮ ಹಿಂದಿನ ತತ್ತ್ವಶಾಸ್ತ್ರಜ್ಞರಿಗೆ ನಿಮ್ಮ ವಿಕಾಸ ವಾದ ತಿಳಿದಿತ್ತು. ಬೆಳವಣಿಗೆ ಮೆಟ್ಟಲು ಮೆಟ್ಟಲಾಗಿ ಕ್ರಮೇಣ ಆಗುವುದು. ಇದರ ಒಪ್ಪಿಗೆಯ ಹಿಂದಿನಿಂದ ಬಂದ ಸಿದ್ಧಾಂತಗಳೆಲ್ಲವನ್ನು ಸಮನ್ವಯ ಮಾಡುವಂತೆ ಮಾಡಿತು. ಆದ ಕಾರಣ ಹಿಂದಿನಿಂದ ಬಂದ ಯಾವ ಭಾವವನ್ನೂ ಅಲ್ಲಗಳೆಯಲಿಲ್ಲ. ಅನವರತ ವಿಕಾಸ ವಾಗುತ್ತಿರುವ ಬೆಳವಣಿಗೆ ಬೌದ್ಧರಿಗೆ ಗೋಚರವಾಗುತ್ತಿರಲಿಲ್ಲ ಮತ್ತು ಅದನ್ನು ತಿಳಿಯಲು ಆಸೆಯೂ ಇರಲಿಲ್ಲ. ಇದೇ ಬೌದ್ಧ ಧರ್ಮದ ಕುಂದು. ಆದ ಕಾರಣ ಅದು ಆ ಘನ ಆದರ್ಶದ ಕಡೆಗೆ ಇದ್ದ ಹಿಂದಿನ ದಾರಿಯನ್ನು ಒಂದುಗೂಡಿಸುವ ಯತ್ನವನ್ನು ಕೂಡ ಎಂದಿಗೂ ಮಾಡಲಿಲ್ಲ. ಅಹಿತಕರವೆಂದೂ ನಿಷ್ಪ್ರಯೋಜನವೆಂದೂ ಅದನ್ನು ತ್ಯಜಿಸಿದರು.

ಇಂತಹ ಧಾರ್ಮಿಕ ಪ್ರವೃತ್ತಿ ಬಹಳ ಕೇಡಿಗೆ ಕಾರಣ. ಮನುಷ್ಯನಿಗೆ ಒಂದು ಹೊಸದಾದ ಉತ್ತಮ ಆದರ್ಶ ಸಿಕ್ಕುತ್ತದೆ. ನಂತರ ತಾನು ತ್ಯಜಿಸಿದ ಆದರ್ಶವನ್ನು ನಿಕೃಷ್ಟ ದೃಷ್ಟಿಯಿಂದ ಕಾಣುವನು. ತಕ್ಷಣವೇ ಅವು ಅನಾವಶ್ಯಕವಾಗಿತ್ತೆಂದೂ, ಕೇಡಿಗೆ ಕಾರಣವೆಂದೂ, ನಿರ್ಧರಕ್ಕೆ ಬರುವನು. ಆತನ ಈಗಿನ ದೃಷ್ಟಿಯಿಂದ ಅದು ಎಷ್ಟೇ ಒರಟಾಗಿ ಕಂಡರೂ, ಅವನಿಗೆ, ಹಿಂದಿನದು ಬಹಳ ಉಪಕಾರಿಯಾಗಿತ್ತು, ಇಂದಿನ ಸ್ಥಿತಿಗೆ ಬರುವುದಕ್ಕೆ ಅವು ಬಹಳ ಸಹಾಯವಾಗಿತ್ತು. ನಾವೆಲ್ಲರೂ ಇದೇ ರೀತಿಯಲ್ಲಿ ಅಭಿವೃದ್ಧಿ ಯಾಗಬೇಕು. ಮೊದಲು ಒರಟಾದ ಭಾವಗಳಲ್ಲಿದ್ದು, ಅವುಗಳಿಂದ ಸಹಾಯ ವನ್ನು ಪಡೆದು, ಅದಕ್ಕಿಂತ ಉತ್ತಮಸ್ಥಿತಿಗೆ ಬರಬೇಕೆಂಬುದನ್ನು ಅವನು ಯೋಚಿಸುವುದೇ ಇಲ್ಲ. ಆದಕಾರಣ ಅದ್ವೈತ ಪುರಾತನ ಸಿದ್ಧಾಂತಗಳೊಂದಿಗೆ ಸೌಹಾರ್ದ ದಿಂದಿರುವುದು. ಅದ್ವೈತ ತನಗೆ ಹಿಂದೆ ಇದ್ದ ದ್ವೈತ ಮುಂತಾದ ಸಿದ್ಧಾಂತಗಳೆಲ್ಲವನ್ನೂ ಸ್ವೀಕರಿಸುವುದು. ಅವುಗಳಿಗೆ ಕೇವಲ ಭುಜತಟ್ಟಿ ಉತ್ತೇಜನ ಕೊಡುವ ರೀತಿಯಿಂದ ಅಲ್ಲ. ಅವುಗಳೆಲ್ಲವೂ ಏಕಸತ್ಯದ ಆವಿರ್ಭಾವವೆಂದೂ, ಅದ್ವೈತ ಯಾವ ನಿರ್ಣಯಕ್ಕೆ ಬಂದಿದೆಯೋ ಅದೇ ನಿರ್ಣಯಕ್ಕೆ ಅವು ಕೂಡ ಒಯ್ಯುವುವು ಎಂಬ ಧೃಢವಿಶ್ವಾಸದಿಂದ ಇವುಗಳನ್ನು ಒಪ್ಪಿಕೊಳ್ಳುವುದು.

ಮಾನವ ಜನಾಂಗ ಹತ್ತಿಹೋಗಬೇಕಾಗಿರುವ ಈ ಮೆಟ್ಟಲುಗಳೆಲ್ಲವನ್ನೂ ನಿಂದಿಸದೆ ಆಶೀರ್ವದಿಸಿ ಕಾಪಾಡಬೇಕು. ಆದಕಾರಣ ಈ ದ್ವೈತ ಸಿದ್ಧಾಂತ ಗಳಾವುದನ್ನೂ ತಿರಸ್ಕರಿಸಿಲ್ಲ ಅಥವಾ ಅದನ್ನು ಆಚೆಗೆ ಎಸೆದಿಲ್ಲ. ಆದರೆ ಯಾವುದನ್ನೂ ಕಳೆಯದೆ ಎಲ್ಲವನ್ನೂ ವೇದಾಂತದಲ್ಲಿಟ್ಟಿರುವರು. ಪರಿಮಿತಿಯಿಂದ ಕೂಡಿದ್ದರೂ ತನ್ನಲ್ಲಿಯೇ ಪೂರ್ಣವಾಗಿರುವ ಪ್ರತ್ಯೇಕಾತ್ಮನಿಗೆ ವೇದಾಂತದಲ್ಲಿ ಸ್ಥಳವಿದೆ.

ದ್ವೈತಸಿದ್ಧಾಂತಗಳ ರೀತಿ ಮನುಷ್ಯನು ಕಾಲವಾಗಿ ಇತರ ಲೋಕಗಳಿಗೆ ಹೋಗುತ್ತಾನೆ. ವೇದಾಂತದಲ್ಲಿ ಇಂತಹ ಭಾವನೆಗಳನ್ನು ಸಂಪೂರ್ಣವಾಗಿ ಕಳೆಯದೆ ಇಟ್ಟಿರುವರು. ಅದ್ವೈತಸಿದ್ಧಾಂತದಲ್ಲಿ ಬೆಳವಣಿಗೆಯನ್ನು ಒಪ್ಪಿ ಕೊಂಡಮೇಲೆ, ಈ ಸಿದ್ಧಾಂತಗಳು ಸತ್ಯಾಂಶವನ್ನು ತೋರುತ್ತವೆ ಎಂದು ತಿಳಿದು ಅದಕ್ಕೆ ತಕ್ಕ ಸ್ಥಾನವನ್ನು ಕೊಟ್ಟಿರುವರು.

ದ್ವೈತ ದೃಷ್ಟಿಯಿಂದ ಈ ಪ್ರಪಂಚ ವಸ್ತು ಮತ್ತು ಪ್ರಾಣದಿಂದ ಸೃಷ್ಟಿ ಯಾಗಿದೆ ಎಂದು ನೋಡಲು ಮಾತ್ರ ಸಾಧ್ಯ. ಯಾವುದೋ ಒಂದು ಇಚ್ಛೆಯ ಲೀಲೆ ಎಂದು ನೋಡಬಹುದು. ಆ ಇಚ್ಛೆ ಪ್ರಪಂಚದಿಂದ ಬೇರೆ ಎಂದು

ಮಾತ್ರ ನೋಡಲುಸಾಧ್ಯ. ಆದಕಾರಣ ಅಂತಹ ದೃಷ್ಟಿಯಿಂದ ಮಾನವನು ದೇಹ ಆತ್ಮಗಳ ದ್ವಂದ್ವಮಿಶ್ರವೆಂದು ನೋಡಲೇ ಬೇಕು. ಈ ಆತ್ಮ ಮಿತಿಯಿಂದ ಕೂಡಿದ್ದರೂ, ತನ್ನಷ್ಟಕ್ಕೆ ಪೂರ್ಣವಾಗಿರುವುದು. ಅಂತಹ ಮಾನವನ ಅಮ ರತ್ವ ಮತ್ತು ಭವಿಷ್ಯ ಜೀವನ ಇವೆಲ್ಲ ಆತನ ಆತ್ಮಜ್ಞಾನಕ್ಕೆ ತಕ್ಕಂತೆಯೇ ಇರು ವುದು. ವೇದಾಂತದಲ್ಲಿ ಈ ಭಾವಗಳೆಲ್ಲವನ್ನು ಇಟ್ಟಿರುವರು. ಆದಕಾರಣ ದ್ವೈತಿಗಳ ಕೆಲವು ಸಾಮಾನ್ಯವಾದ ಭಾವನೆಗಳನ್ನು ನಿಮ್ಮ ಮುಂದಿಡುವುದು ಆವಶ್ಯಕ. ಈ ಸಿದ್ಧಾಂತದ ರೀತಿ ನಮಗೆ ಒಂದು ದೇಹವೇನೊ ಇರುವುದು. ಇವರ ಹಿಂದೆ ಅವರು ಕರೆವ ಸೂಕ್ಷ್ಮ ದೇಹವಿದೆ. ಈ ಸೂಕ್ಷ್ಮ ದೇಹವೂ ಕೂಡ ವಸ್ತುವಿನಿಂದ ಮಾಡಿದೆ. ಆದರೆ ಇದು ಸೂಕ್ಷ್ಮ ಅಷ್ಟೆ. ಪ್ರತ್ಯಕ್ಷವಾದ ರೂಪಕ್ಕೆ ಬರಲು ಸಿದ್ಧವಾಗಿರುವ ನಮ್ಮ ಎಲ್ಲಾ ಕರ್ಮಗಳ ಕ್ರಿಯೆಯ ಅನುಭವಗಳ ನಿಧಿ ಇದು. ನಾವು ಮಾಡುವ ಪ್ರತಿಯೊಂದು ಆಲೋಚನೆ ಮತ್ತು ಕ್ರಿಯೆ ಕೆಲವು ಕಾಲದ ಮೇಲೆ ಸೂಕ್ಷ್ಮವಾಗಿ ಬೀಜರೂಪಕ್ಕೆ ಬಂದಂತೆ ತೋರುವುದು. ಸೂಕ್ಷ್ಮ ದೇಹದಲ್ಲಿ ಅವ್ಯಕ್ತವಾಗಿದ್ದು, ಕೆಲವು ಕಾಲದಮೇಲೆದ್ದು ಪ್ರತಿಫಲವನ್ನು ಕೊಡುವುದು. ಈ ಪ್ರತಿಫಲಗಳೇ ಮನುಷ್ಯನ ಜೀವನದ ಸ್ಥಿತಿ ಯನ್ನು ನಿರ್ಧರಿಸುವುದು. ಹೀಗೆ ಮನುಷ್ಯನು ತನ್ನ ಸ್ಥಿತಿಗೆ ತಾನೇ ಕಾರಣ ನಾಗುವನು. ನಮ್ಮ ಆಲೋಚನೆ, ಮಾತು ಮತ್ತು ಕಾರ್ಯ, ಒಳ್ಳೆಯದಕ್ಕೋ ಕೆಟ್ಟದ್ದಕ್ಕೋ ನಮ್ಮ ಮೇಲೆ ಬೀಸಿಕೊಳ್ಳುವ ಬಲೆಯ ದಾರ. ಒಮ್ಮೆ ನಾವೊಂದು ಶಕ್ತಿಯನ್ನು ಚಲಿಸುವಂತೆ ಮಾಡಿದರೆ ಅದರ ಪೂರ್ಣ ಪರಿಣಾಮ ವನ್ನು ನಾವು ಪಡೆಯಲೇಬೇಕು. ಇದೇ ಕರ್ಮ ನಿಯಮ. ಸೂಕ್ಷ್ಮ ಶರೀರದ ಹಿಂದೆ ಜೀವಾತ್ಮನಿರುವನು. ಜೀವಾತ್ಮನ ಆಹಾರ ಮತ್ತು ಪ್ರಮಾಣಗಳ ವಿಚಾರವಾಗಿ ಹಲವು ಚರ್ಚೆಗಳಿವೆ. ಕೆಲವರ ದೃಷ್ಟಿಯಲ್ಲಿ ಅದು ಕಣದಂತೆ ಬಹಳ ಸಣ್ಣದು. ಮತ್ತೆ ಕೆಲವರ ದೃಷ್ಟಿಯಲ್ಲಿ ಅದು ಅಷ್ಟು ಸಣ್ಣದಲ್ಲ. ಮತ್ತೆ ಕೆಲವರ ದೃಷ್ಟಿಯಿಂದ ಅದು ಬಹಳ ದೊಡ್ಡದು – ಇತ್ಯಾದಿ ಹಲವು ಅಭಿ ಪ್ರಾಯಗಳಿವೆ. ಜೀವಾತ್ಮನು ಪರಮಾತ್ಮನ ಒಂದು ಅಂಶ. ಇದೂ ಕೂಡ ಆದರಂತೆ ಅನಾದ್ಯನಂತ. ಅನಾದಿ ಕಾಲದಿಂದಲೂ ಇದು ಇದೆ. ಮುಂದೆ ಅಂತ್ಯವಿಲ್ಲದೆ ಇರುವುದು. ತನ್ನ ನೈಜಸ್ವರೂಪವಾದ ಪಾವನತೆಯನ್ನು ಪ್ರದರ್ಶಿಸುವುದಕ್ಕೋಸುಗವಾಗಿ ಹಲವು ಆಕಾರಗಳ ಮೂಲಕ ಇದು ಹಾದು ಹೋಗುತ್ತಿದೆ. ಪಾವನತೆಯ ಪ್ರದರ್ಶನಕ್ಕೆ ಆತಂಕವನ್ನು ತಂದೊಡ್ಡುವ ಪ್ರತಿಯೊಂದು ಆಲೋಚನೆಯೂ ಪಾಪ. ಆದರಂತೆಯೇ ಕ್ರಿಯೆಯೂ ಕೂಡ.

ಜೀವಾತ್ಮನು ವಿಕಾಸವಾಗುವುದಕ್ಕೆ, ತನ್ನ ನೈಜ ಸ್ವಭಾವವನ್ನು ಬೆಳಗಲು ಸಹಾಯಮಾಡುವ ಪ್ರತಿಯೊಂದು ಕ್ರಿಯೆ ಮತ್ತು ಆಲೋಚನೆ ಕೂಡ ಪುಣ್ಯ. ಪ್ರಾರಂಭದಲ್ಲಿರುವ ದ್ವೈತಿಗಳಿಂದ ಹಿಡಿದು ಬಹಳ ಮುಂದುವರಿದ ಅದ್ವೈತಿಗಳವರೆಗೂ ಎಲ್ಲರೂ ಒಪ್ಪಿಕೊಳ್ಳುವ ಸಾಮಾನ್ಯ ಸಿದ್ಧಾಂತವೇ, ಆತ್ಮನ ಎಲ್ಲಾ ಶಕ್ತಿ ಮತ್ತು ಸಾಧ್ಯತೆಗಳು ಆಗಲೆ ಅದರಲ್ಲಿದೆ, ಹೊರಗಿನಿಂದ ಬರುವುದಿಲ್ಲ ಎನ್ನುವುದು. ಆಗಲೆ ಇವು ಆತ್ಮನಲ್ಲಿ ಅವ್ಯಕ್ತರೂಪದಲ್ಲಿರುವುದು. ಇವನ್ನು ವ್ಯಕ್ತಮಾಡುವುದಕ್ಕೋಸುಗವಾಗಿಯೆ ನಮ್ಮ ಜೀವನದ ಕಾರ್ಯಗಳೆಲ್ಲ ಇರುವುದು.

ಅವರಲ್ಲಿ ಪುನರ್ಜನ್ಮ ಸಿದ್ಧಾಂತವೂ ಇದೆ. ಈ ಜಗದಲ್ಲೋ ಅಥವಾ ಇನ್ನು ಯಾವುದಾದರೂ ಜಗತ್ತಿನಲ್ಲಿಯೋ ಈ ಜನ್ಮವಾದ ಮೇಲೆ ಮತ್ತೊಂದು ಜನ್ಮ, ಅದಾದ ಮೇಲೆ ಇನ್ನೊಂದು ಜನ್ಮವನ್ನು ಪಡೆಯುತ್ತಾ ಹೋಗುವುದೆನ್ನುವರು. ಆದರೆ ಈ ಜಗತ್ತನ್ನು ಮೊದಲು ಆಶಿಸುವರು. ಏಕೆಂದರೆ ಇದೇ ಇರುವ ಪ್ರಪಂಚದಲ್ಲೆಲ್ಲ ಅತ್ಯುತ್ತಮವಾದುದೆಂದು ಅವರ ಅಭಿಪ್ರಾಯ. ಉಳಿದ ಲೋಕದಲ್ಲಿ ದುಃಖ ಇಲ್ಲಿಗಿಂತ ಕಡಿಮೆ ಎಂಬುದು ಅವರ ಮತ. ಆದರೆ, ಅದಕ್ಕೋಸ್ಕರವೆ ಅಲ್ಲಿ ಉತ್ತಮ ವಿಷಯಗಳನ್ನು ಆಲೋಚಿಸುವುದಕ್ಕೆ ಅವಕಾಶ ಕಡಿಮೆ. ಸ್ವಲ್ಪ ಸುಖ ಹೆಚ್ಚಾಗಿ ಕಷ್ಟವಿರುವುದರಿಂದ ಜೀವನು ಎಂದಾದರೊಮ್ಮೆ ಜಾಗ್ರತನಾಗಿ ಮುಕ್ತನಾಗಲು ಆಶಿಸುವನು. ಈ ಪ್ರಪಂಚದಲ್ಲಿ ಅತಿ ಶ್ರೀಮಂತರಿಗೆ ಹೇಗೆ ಒಳ್ಳೆಯ ವಿಷಯಗಳನ್ನು ಆಲೋಚಿಸಲು ಅವಕಾಶ ಬಹಳ ಕಡಿಮೆ ಇದೆಯೋ, ಅದರಂತೆಯೇ ಸ್ವರ್ಗದಲ್ಲಿರುವ ಜೀವನಿಗೂ ಅಭಿವೃದ್ಧಿಗೆ ಅವಕಾಶ ಕಡಿಮೆ. ಇವರ ಅವಸ್ಥೆಯು ಶ್ರೀಮಂತನಂತೆ. ಆದರೆ ಅವನಿಗಿಂತಲೂ ಸುಖ ಮತ್ತೂ ಹೆಚ್ಚು ಅಷ್ಟೆ. ಜೀವನಿಗೆ ಯಾವ ರೋಗಭಯವೂ ಇಲ್ಲದ ಒಂದು ಸೂಕ್ಷ್ಮ ದೇಹವಿರುವುದು. ಹಸಿವು ದಾಹಗಳ ಬಾಧೆ ಇದಕ್ಕೆ ಇಲ್ಲ. ಇದರ ಬಯಕೆಗಳೆಲ್ಲ ಪೂರ್ಣವಾಗಿದೆ. ಭೋಗದ ಮೇಲೆ ಭೋಗವನ್ನು ಅನುಭವಿಸುತ್ತ ಜೀವವು ಅಲ್ಲಿ ವಾಸಿಸುವುದು. ಹೀಗೆ ತನ್ನ ನೈಜ ಸ್ವಭಾವವನ್ನು ಅದು ಮರೆಯುವುದು. ಎಷ್ಟು ಭೋಗಗಳಿದ್ದರೂ ಅಭಿವೃದ್ಧಿಗೆ ಅವಕಾಶವಿರುವ ಕೆಲವು ಲೋಕಗಳಿವೆ. ಕೆಲವು ದ್ವೈತಿಗಳು ಆತ್ಮವು ದೇವರೊಂದಿಗೆ ಶಾಶ್ವತವಾಗಿರುವುದೇ ಅವರ ಗುರಿಯು ಪರಮ ಪದವೆಂದು ತಿಳಿಯುವರು. ಅಲ್ಲಿ ಅವರಿಗೆ ಸುಂದರವಾದ ದೇಹಗಳಿರುತ್ತವೆ. ಸಾವು ರೋಗ ಮತ್ತು ಪಾಪದ ಸುಳಿವು ಕೂಡ ಅವರಿಗೆ ಅಲ್ಲಿ ಇರುವುದಿಲ್ಲ. ಅಲ್ಲಿ ಅವರ ಬಯಕೆಗಳೆಲ್ಲ ಪೂರ್ಣವಾಗುವುವು.

ಕೆಲವು ವೇಳೆ ಅವರಲ್ಲಿ ಕೆಲವರು ಈ ಪ್ರಪಂಚಕ್ಕೆ ಹಿಂತಿರುಗಿ ಬಂದು ಮಾನವನಿಗೆ ದೇವರೆಡೆಗೆ ದಾರಿತೋರಲು ಉಪದೇಶಮಾಡುವುದಕ್ಕಾಗಿ ದೇಹಧಾರಣೆ ಮಾಡು ವರು. ಇಂತಹವರೆ ಪ್ರಪಂಚದ ಆಚಾರ್ಯ ಪುರುಷರು. ಅವರಾಗಲೇ ಮುಕ್ತರಾಗಿ ಅತ್ಯುತ್ತಮ ಲೋಕದಲ್ಲಿ ದೇವರೊಂದಿಗೆ ವಾಸಿಸುತ್ತಿದ್ದರು. ಆದರೆ ದುಃಖದಲ್ಲಿ ನರಳುತ್ತಿರುವ ಮಾನವನಿಗೆ ಅವರೆದೆಯಲ್ಲಿ ಪ್ರೇಮ ಮತ್ತು ಸಹಾನುಭೂತಿ ಜಿನುಗುತ್ತಿತ್ತು. ಆದಕಾರಣ ಮಾನವನಿಗೆ ಮೋಕ್ಷಮಾರ್ಗವನ್ನು ಬೋಧಿಸು ವುದಕ್ಕಾಗಿ ಪುನಃ ಅವತಾರ ಮಾಡಿದರು.

ಇದೇ ನಮ್ಮ ಪರಮ ಆದರ್ಶವಾಗಲಾರದೆಂದು ಅದ್ವೈತಿಗಳು ಹೇಳುವುದು ತಮಗೆ ಗೊತ್ತೇ ಇದೆ. ದೇಹಾತೀತರಾಗುವುದೇ ನಮ್ಮ ಗುರಿಯಾಗಬೇಕು. ಆದರ್ಶವು ಸಾಂತವಾಗಿರಲಾರದು. ಅನಂತಕ್ಕಿಂತ ಸ್ವಲ್ಪ ಕಡಿಮೆಯಾದರೂ ನಮ್ಮ ಆದರ್ಶವಾಗಲಾರದು. ಮತ್ತು ಅನಂತವಾದ ದೇಹವಿರಲು ಸಾಧ್ಯವಿಲ್ಲ. ದೇಹ ಅಂತದಿಂದ ಬಂದಿರುವ ಕಾರಣ ಅದು ಎಂದಿಗೂ ಸಾಧ್ಯವಾಗುವುದಿಲ್ಲ. ಅನಂತ ಆಲೋಚನೆ ಕೂಡ ಇರಲಾರದು. ಏಕೆಂದರೆ ಆಲೋಚನೆ ಹುಟ್ಟು ವುದೇ ಅಂತದಲ್ಲಿ. ನಾವು ದೇಹದ ಆಚೆ, ಆಲೋಚನೆಯ ಆಚೆಯೂ ಕೂಡ ಹೋಗಬೇಕೆಂದು ಅದ್ವೈತ ಸಾರುವುದು. ಅದ್ವೈತ ಸಿದ್ಧಾಂತದ ಪ್ರಕಾರ ಈ ಸ್ವಾತಂತ್ರ್ಯವನ್ನು ನಾವು ಹೊಸದಾಗಿ ಗಳಿಸಬೇಕಾಗಿಲ್ಲ. ಅದು ಆಗಲೇ ನಮ್ಮದಾಗಿರುವುದು ಎಂಬುದನ್ನು ನಾವು ಆಗಲೇ ನೋಡಿರುವೆವು. ನಾವು ಅದನ್ನು ಮರೆತು ಅಲ್ಲಗಳೆಯುವೆವು ಅಷ್ಟೆ. ನಾವು ಪೂರ್ಣತೆಯನ್ನು ಹೊಂದ ಬೇಕಾಗಿಲ್ಲ. ಅದಾಗಲೆ ನಮ್ಮಲ್ಲಿರುವುದು. ಅಮರತ್ವ ಮತ್ತು ಆನಂದವನ್ನು ನಾವು ಹೊಸದಾಗಿ ಗಳಿಸಬೇಕಾಗಿಲ್ಲ. ಅದಾಗಲೇ ನಮ್ಮಲ್ಲಿರುವುದು. ತ್ರಿಕಾಲ ದಲ್ಲಿಯೂ ಅದು ನಮ್ಮದಾಗಿರುವುದು.

ನೀವು ಸ್ವತಂತ್ರರೆಂದು ದೃಢವಾಗಿ ಸಾರಲು ಪ್ರಯತ್ನಪಟ್ಟರೆ, ಈ ಕ್ಷಣವೆ ನೀವು ಮುಕ್ತರು. ನಾನು ಬದ್ಧನೆಂದು ಹೇಳಿದರೆ ಬದ್ಧನಾಗಿಯೆ ಇರುವಿರಿ. ಇದನ್ನೇ ಅದ್ವೈತ ಧೈರ್ಯದಿಂದ ಸಾರುವುದು. ನಾನು ನಿಮಗೆ ದ್ವೈತಿಗಳ ಭಾವನೆ ಯನ್ನು ಹೇಳಿರುವೆನು. ಯಾವುದನ್ನು ಬೇಕಾದರೂ ನೀವು ಸ್ವೀಕರಿಸಬಹುದು.

ವೇದಾಂತದ ಗಹನ ಆದರ್ಶಗಳನ್ನು ತಿಳಿದುಕೊಳ್ಳುವುದು ಕಷ್ಟ. ಜನರು ಯಾವಾಗಲೂ ಇದರ ವಿಚಾರವಾಗಿ ಕಾದಾಡುತ್ತಿರುವರು. ಅತಿ ದೊಡ್ಡ ಆತಂಕವೆ ಇದು: ಅದೆ, ಕೆಲವು ಭಾವಗಳು ಇವರ ವಶವಾದರೆ, ಉಳಿದ ಭಾವಗಳನ್ನು ನಿಶೇಧಿಸಿ ಅವುಗಳೊಂದಿಗೆ ಹೋರಾಡುವರು. ನಿಮಗೆ ಸರಿಯಾದು

ದನ್ನು ನೀವು ಸ್ವೀಕರಿಸಿ. ಉಳಿದವರಿಗೆ ಯಾವುದು ಆವಶ್ಯಕವೋ ಅವರು ಅದನ್ನು ಸ್ವೀಕರಿಸಲಿ. ಪ್ರತ್ಯೇಕವಾಗಿರುವ ವ್ಯಷ್ಟಿ ವ್ಯಕ್ತಿತ್ವವನ್ನು ನೀವು ಇಟ್ಟುಕೊಂಡಿರಬೇಕೆಂದು ಬಯಸಿದರೆ ಅದರಂತೆ ಇರಿ. ಬಯಕೆಗಳನ್ನೆಲ್ಲಾ ಇಟ್ಟುಕೊಳ್ಳಿ. ಅವುಗಳನ್ನು ಹೊಂದಿ ಸಂತೋಷವಾಗಿ ಸಮಾಧಾನದಿಂದ ಇರಿ. ನಿಮ್ಮ ಜೀವನದ ಅನುಭವವು ಚೆನ್ನಾಗಿದ್ದರೆ, ನಿಮಗೆ ಬೇಕಾಗುವತನಕ ಅದನ್ನು ಇಟ್ಟುಕೊಳ್ಳಿ. ನೀವು ಹಾಗೆ ಮಾಡಬಹುದು. ನಿಮ್ಮ ನಿಮ್ಮ ಅದೃಷ್ಟ ನಿಮ್ಮಗಳ ಕೈಯಲ್ಲಿರುವುದು. ನಿಮ್ಮ ಪುರುಷಾಕಾರವನ್ನು ತ್ಯಜಿಸುವಂತೆ ಯಾರೂ ಬಲಾತ್ಕಾರಮಾಡಲಾರರು. ಎಷ್ಟು ಕಾಲ ನೀವು ಆಶಿಸುವಿರೋ ಅಷ್ಟು ಕಾಲ ನೀವು ಮನುಷ್ಯರಾಗಿರುವಿರಿ. ಯಾರೂ ನಿಮಗೆ ಅಡ್ಡಿಯನ್ನು ತರಲಾರರು. ನೀವು ದೇವತೆಗಳಾಗಬೇಕೆಂದು ಆಲೋಚಿಸಿದರೆ ನೀವು ದೇವತೆಗಳಾಗುವಿರಿ. ಅದೇ ಪ್ರಕೃತಿ ನಿಯಮ. ದೇವತೆಗಳೂ ಕೂಡ ಆಗಲು ಇಚ್ಛಿಸದವರು ಕೆಲವರು ಇರಬಹುದು. ಅವರದು ಒಂದು ಘೋರ ಭಾವನೆ ಎಂದು ತಿಳಿಯುವುದಕ್ಕೆ ನಿಮಗೆ ಏನು ಅಧಿಕಾರವಿರುವುದು? ನೂರು ಪೌಂಡನ್ನು ಕಳೆದುಕೊಳ್ಳುವುದಕ್ಕೆ ನಿಮಗೆ ತುಂಬಾ ಅಂಜಿಕೆಯಾಗಬಹುದು. ಆದರೆ ಪ್ರಪಂಚದಲ್ಲಿ ತಮ್ಮ ಸರ್ವಸ್ವ ಹೋದರೂ ಕಣ್ಣನ್ನು ಕೂಡ ಮಿಟಕಿಸದವರು ಕೆಲವರು ಇರಬಹುದು. ಅಂತಹ ವ್ಯಕ್ತಿಗಳು ಹಿಂದೆ ಇದ್ದರು; ಈಗಲೂ ಕೂಡ ಇರುವರು. ನಿಮ್ಮಂತೆಯೆ ಇನ್ನೊಬ್ಬರನ್ನು ಅಳೆಯಲು ಏಕೆ ಸಾಹಸ ಪಡುವಿರಿ. ನಿಮಗಿರುವ ಬಂಧನಗಳನ್ನು ನೀವು ಬಾಚಿ ತಬ್ಬಿಕೊಂಡಿರುವಿರಿ. ಈ ಪ್ರಾಪಂಚಿಕ ಕ್ಷುದ್ರ ವಿಷಯಗಳು ನಿಮ್ಮ ಜೀವನದ ಗುರಿಯು ಪರಮಾವಧಿಯಾಗಿರಬಹುದು. ನೀವು ಬೇಕಾದರೆ ಅದನ್ನು ಸ್ವೀಕರಿಸಬಹುದು. ನೀವು ಬಯಸಿದಂತೆ ನಿಮಗೆ ಆಗುವುದು. ಆದರೆ ಸತ್ಯವನ್ನು ಸಂದರ್ಶಿಸಿದ ಕೆಲವರು ಇರುವರು. ಈ ಬಂಧನದಲ್ಲಿ ಅವರು ಬಾಳಲಾರರು. ಇವುಗಳೇನೆಂಬುದು ಅವರಿಗೆ ಗೊತ್ತಾಗಿದೆ. ಇವುಗಳನ್ನು ಮೀರಿ ಹೋಗಬೇಕೆನ್ನುವರು. ಸಮಸ್ಥ ಸುಖಭೋಗಗಳಿಂದ ತುಂಬಿದ ಪ್ರಪಂಚ ಅವರ ಪಾಲಿಗೆ ಒಂದು ಗೊಬ್ಬರದ ಗುಂಡಿಯಂತೆ. ನಿಮ್ಮ ಭಾವನೆಗಳಿಂದ ಅವರನ್ನು ನಿರ್ಬಂಧಿಸಲು ಏಕೆ ಇಚ್ಛಿಸುವಿರಿ? ಈ ಸ್ವಭಾವದಿಂದ ನೀವು ಒಮ್ಮೆಯೇ ಪಾರಾಗಬೇಕು. ಪ್ರತಿಯೊಬ್ಬರಿಗೂ ಇರುವುದಕ್ಕೆ ಒಂದು ಸ್ಥಳವನ್ನು ಕೊಡಿ.

ದಕ್ಷಿಣ ಸಮುದ್ರ ದ್ವೀಪಗಳ ಸಮೀಪದಲ್ಲಿ ಸುಳಿಗಾಳಿಗೆ ಸಿಕ್ಕಿದ ಕೆಲವು ಹಡಗುಗಳ ಕಥೆಯನ್ನು ನಾವು ಒಮ್ಮೆ ಓದಿದೆ. Illustrated London

News ನಲ್ಲಿ ಅದರ ಒಂದು ಚಿತ್ರವಿತ್ತು. ಇಂಗ್ಲೀಷಿನವರ ಹಡಗೊಂದು ಉಳಿದು ಉಳಿದ ಎಲ್ಲಾ ಹಡಗುಗಳೂ ನಾಶವಾಯಿತು. ಅದು ಆ ಪ್ರಚಂಡ ಸುಳಿಗಾಳಿ ಯಲ್ಲಿ ಮುಂದುವರಿಯುತ್ತಿತ್ತು. ಮುಳುಗುತ್ತಿದ್ದ ಹಡಗಿನಲ್ಲಿದ್ದ ಜನರು ಮೇಲಿನ ಅಂತಸ್ತಿನ ಮೇಲೆ ನಿಂತು ಮುಂದೆ ಹೋಗುತ್ತಿದ್ದ ಹಡಗಿನ ಜನರನ್ನು ನೋಡಿ ಆನಂದದಿಂದ ಘೋಷಿಸುತ್ತಿದ್ದ ಒಂದು ಚಿತ್ರವಿತ್ತು. ಅದರಂತೆ ಧೈರ್ಯ ವಾಗಿರಿ, ಧಾರಾಳವಾಗಿರಿ. ನೀವಿರುವ ಹಳ್ಳಕ್ಕೆ ಮತ್ತೊಬ್ಬರನ್ನು ಎಳೆಯಬೇಡಿ. ಮತ್ತೊಂದು ಮೂಢ ಭಾವನೆ ಯಾವುದೆಂದರೆ, ನಮ್ಮ ಈ ಅಲ್ಪ ವ್ಯಕ್ತಿತ್ವವನ್ನು ಕಳೆದುಕೊಂಡರೆ, ನೀತಿಯೆ ಇರುವುದಿಲ್ಲ, ಮಾನವನಿಗೆ ನೆಚ್ಚುಗೆಯೆ ಇರುವುದಿಲ್ಲ ವೆಂಬುದು. ಇದುವರೆಗೂ ಎಲ್ಲರೂ ಜನಾಂಗಕ್ಕಾಗಿ ಬಹಳ ಸಾಯುತ್ತಿದ್ದಂತೆ! ದೇವರು ನಿಮಗೆ ಒಳ್ಳೆಯದು ಮಾಡಲಿ. ಪ್ರತಿಯೊಂದು ದೇಶದಲ್ಲಿಯೂ ಇನ್ನೂರು ಜನ ಸ್ತ್ರಿ ಪುರುಷರು ಸತ್ಯವಾಗಿ ಮಾನವನ ಕಲ್ಯಾಣವನ್ನು ಕುರಿತು ಚಿಂತಿಸಿದರೆ ಸ್ವರ್ಣಯುಗ ಐದೇ ದಿನದಲ್ಲಿ ಉದಿಸುತ್ತಿತ್ತು. ನಾವು ಮಾನವ ಜನಾಂಗಕ್ಕಾಗಿ ಹೇಗೆ ಪ್ರಾಣ ಕೊಡುತ್ತಿರುವೆವು ಎಂಬುದು ನಮಗೇ ಗೊತ್ತಿದೆ! ಇವುಗಳೆಲ್ಲ ಒಣ ವೇದಾಂತ, ಮತ್ತೇನೂ ಇಲ್ಲ. ಯಾರು ತಮ್ಮ ಅಲ್ಪ ವ್ಯಕ್ತಿತ್ವದ ಸಲುವಾಗಿ ಸ್ವಲ್ಪವೂ ಗಮನ ಕೊಡುವುದಿಲ್ಲವೋ, ಅವರೇ ಮಾನವ ವರ್ಗದ ಅತ್ಯುತ್ತಮ ಉಪಕಾರಿಗಳು. ಎಷ್ಟು ಹೆಚ್ಚಾಗಿ ಪುರುಷರು ಮತ್ತು ಸ್ತ್ರೀಯರು ತಮ್ಮ ಸಲುವಾಗಿ ಆಲೋಚನೆ ಮಾಡುತ್ತಾರೆಯೋ, ಅಷ್ಟು ಕಡಿಮೆ ಮತ್ತೊಬ್ಬರಿಗೆ ಉಪಕಾರ ಮಾಡುವುದು. ಒಂದು ನಿಸ್ವಾರ್ಥತೆ, ಮತ್ತೊಂದು ಸ್ವಾರ್ಥತೆ. ಅಲ್ಪಭೋಗಗಳ ದಾಸನಾಗಿ, ಅಂತಹಸ್ಥಿತಿ ಮತ್ತೆ ಮತ್ತೆ ಬರಬೇಕೆಂದು, ಅದು ಮುಂದೆಯೂ ಇರಬೇಕೆಂದು ಆಶಿಸುವುದು ಶುದ್ಧ ಸ್ವಾರ್ಥತೆ. ಸತ್ಯಾಭಿಲಾಷೆ ಯಿಂದ ಈ ಭಾವಗಳು ಬರುವುದಿಲ್ಲ. ಮತ್ತೊಬ್ಬರ ಉಪಕಾರಕ್ಕೋಸುಗವಾಗಿ ಈ ಭಾವಗಳು ಬರಲಿಲ್ಲ. "ಎಲ್ಲವೂ ನನಗಿರಲಿ. ನಾನು ಇನ್ನೊಬ್ಬನಿಗೆ ಲೆಕ್ಕಿಸುವು ದಿಲ್ಲ" ಎಂಬ ಮಾನವನ ಹೃದಯದಲ್ಲಿರುವ ಸ್ವಾರ್ಥ ಭಾವನೆಯೆ ಇದಕ್ಕೆ ಮುಖ್ಯ ಕಾರಣ. ನನಗೆ ತೋರುವುದೇ ಹೀಗೆ. ಒಂದು ಸಣ್ಣ ಮೃಗಕ್ಕೆ ಉಪಕಾರ ಆಗುವ ಹಾಗಿದ್ದರೆ, ತಮ್ಮ ನೂರು ಜನ್ಮಗಳನ್ನಾದರೂ ತೆರಬಲ್ಲವರಾಗಿದ್ದ, ಪೂರ್ವ ಕಾಲದ ಮಹಾ ಮಹಿಮರಾದ ಋಷಿಗಳಂತಹ ದೇವದೂತರನ್ನು, ಧಾರ್ಮಿಕ ವ್ಯಕ್ತಿಗಳನ್ನು, ನಾನು ನೋಡ ಬಯಸುವೆನು! ನೀತಿಯನ್ನು, ಪರೋಪಕಾರದ ವಿಚಾರವನ್ನು ನೀವು ಮಾತನಾಡುವಿರಲ್ಲ! ಕೆಲಸಕ್ಕೆ ಬಾರದ ಇಂದಿನ ಕಾಲದ ಮಾತು.

ಸಾಕಾರ ದೇವರಲ್ಲಿ ಆಗಲೀ ಅಥವಾ ಜೀವಾತ್ಮನಲ್ಲಿ ಆಗಲೀ ನಂಬದ, ಅದರ ವಿಚಾರವನ್ನು ಕೂಡ ಎತ್ತದ, ಅತಿ ಧರ್ಮಾತ್ಮರಾದಂತ ಬುದ್ಧನಂತಹ ವ್ಯಕ್ತಿಗಳನ್ನು ನಾನು ನೋಡ ಬಯಸುವೆನು. ಸಂಪೂರ್ಣ ಅಜ್ಞೇಯ ವಾದಿಯಾಗಿದ್ದನವನು. ಆದರೂ ಕೂಡ ಯಾರಿಗೆ ಬೇಕಾದರೂ ತನ್ನ ಜೀವನವನ್ನು ಧಾರೆ ಎರೆಯಲು ಸಿದ್ಧನಾಗಿದ್ದನು. ಸರ್ವರ ಹಿತಕ್ಕೋಸುಗ ತಾನು ಬದುಕಿರುವವರೆಗೂ ದುಡಿದನು. ಎಲ್ಲರ ಹಿತ ಚಿಂತನೆಯೇ ಅವನ ಬಯಕೆಯಾಗಿತ್ತು. ಬಹು ಜನರ ಹಿತಕ್ಕೆ, ಬಹುಜನರ ಸುಖಕ್ಕೆ ಅವನು ಜನ್ಮವೆತ್ತಿದನು ಎಂದು ಅವನ ಜೀವನ ಚರಿತ್ರೆಕಾರರು ಸರಿಯಾಗಿಯೆ ವರ್ಣಿಸಿರುವರು. ತನ್ನ ಸ್ವಂತ ಮುಕ್ತಿಯನ್ನು ಸಂಪಾದಿಸಲೋಸುಗ ತಪಸ್ಸುಮಾಡಲು ಅವನು ಕಾಡಿಗೆ ಹೋದವನಲ್ಲ. ಪ್ರಪಂಚ ದುಃಖದ ಕಾಡ್ಗಿಚ್ಚಿನಲ್ಲಿ ಸಿಕ್ಕಿದೆ. ಅದರಿಂದ ಪಾರಾಗಲು ಒಂದು ದಾರಿಯನ್ನು ಕಂಡುಹಿಡಿಯಬೇಕೆಂಬುದೇ ಅವನ ಬಯಕೆಯಾಗಿತ್ತು. ಈ ಪ್ರಪಂಚದಲ್ಲಿ ಏತಕ್ಕೆ ಇಷ್ಟೊಂದು ದುಃಖವಿದೆ ಎಂಬುದೇ ಅವನ ಜೀವನವನ್ನೆಲ್ಲ ಆವರಿಸಿದ ಒಂದು ಪ್ರಶ್ನೆಯಾಗಿತ್ತು. ಬುದ್ಧದೇವನಷ್ಟು ನಾವು ಧರ್ಮಿಗಳೆಂದು ಭಾವಿಸಿದಿರಾ ?

ಮನುಷ್ಯನು ಸ್ವಾರ್ಥ ಪರನಾದಷ್ಟೂ ಅಧರ್ಮಿಯಾಗುವನು. ಅದರಂತೆಯೇ ಜನಾಂಗ ಕೂಡ. ತನ್ನ ಸುಖವೇ ಪರಮಾವಧಿ ಎಂದು ತಿಳಿದುಕೊಂಡ ಜನಾಂಗ ಪ್ರಪಂಚದಲ್ಲೆಲ್ಲ ಅತಿಕ್ರೂರವಾದುದು ಮತ್ತು ಹೀನವಾದುದು. ಅರೇಬಿಯದ ದೇವದೂತನಿಂದ ಸ್ಥಾಪಿತವಾದ ಧರ್ಮದ ಅನುಯಾಯಿಗಳಷ್ಟು ಹೆಚ್ಚಾಗಿ ಈ ದ್ವೈತದಲ್ಲಿ ನಂಬಿದ್ದ ಮತ್ತೊಬ್ಬರಿಲ್ಲ. ಇತರರನ್ನು ಕಂಡರೆ ಇವರಷ್ಟು ನಿರ್ದಯರಾಗಿ ವರ್ತಿಸಿದ, ಇವರಷ್ಟು ರಕ್ತದ ಕಾಲುವೆಯನ್ನು ಹರಿಸಿದ ಮತ್ತೊಂದು ಧರ್ಮವಿಲ್ಲ. ಯಾರು ಈ ಉಪದೇಶಗಳಲ್ಲಿ ನಂಬುವುದಿಲ್ಲವೋ ಅವರನ್ನು ಕೊಲ್ಲಬೇಕೆಂಬ ಸಿದ್ಧಾಂತ ಖೊರಾನಿನಲ್ಲಿಯೇ ಇದೆ. ಅಂತಹವನನ್ನು ಕೊಲ್ಲುವುದೊಂದು ದಯೆಯಿಂದ ಪ್ರೇರಿತವಾದ ಪರೋಪಕಾರ! ಚಿರ ಯೌವನದಲ್ಲಿರುವ ಸ್ತ್ರೀಯರು ಮತ್ತು ಎಲ್ಲಾ ವಿಧದ ವಿಷಯ ಭೋಗಗಳಿಂದ ತುಂಬಿ ತುಳುಕಾಡುತ್ತಿರುವ ಸ್ವರ್ಗಕ್ಕೆ ನಿಸ್ಸಂಶಯವಾಗಿ ಹೋಗಲು ಮಹಮ್ಮದೀಯ ಧರ್ಮದಲ್ಲಿ ನಂಬದವರನ್ನು ಕೊಲ್ಲುವುದೊಂದೆ ನೇರವಾದ ಹಾದಿ. ಇಂತಹ ನಂಬಿಕೆಗಳ ಪರಿಣಾಮವಾಗಿ ಎಷ್ಟೊಂದು ರಕ್ತ ಹರಿದಿದೆ ಎಂದು ನೀವೆ ಆಲೋಚಿಸಿ ನೋಡಿ!

ಕ್ರೈಸ್ತಧರ್ಮದಲ್ಲಿ ಒರಟು ತನವಿರುವುದು ಬಹಳ ಸ್ವಲ್ಪ. ಶುದ್ಧ ಕ್ರೈಸ್ತ ಧರ್ಮಕ್ಕೂ ವೇದಾಂತಕ್ಕೂ ವ್ಯತ್ಯಾಸವಿರುವುದು ಬಹಳ ಸ್ವಲ್ಪ. ಇಲ್ಲಿಯೂ ಏಕ

ತ್ವದ ಭಾವನೆ ಇದೆ, ಆದರೆ ಕ್ರೈಸ್ತನು ಸಾಧಾರಣ ಜನರಿಗೆ ತಿಳಿಯಲು ಅನುಕೂಲವಾಗುವಂತೆ ಕೆಲವು ಸ್ಥೂಲಭಾವನೆಗಳನ್ನು ಕೊಟ್ಟು, ಕ್ರಮೇಣ ಅವರನ್ನು ಪರಮಾದರ್ಶದೆಡೆಗೆ ಒಯ್ಯುವುದಕ್ಕೋಸುಗ ದ್ವೈತ ಭಾವನೆಗಳನ್ನು ಉಪದೇಶಿಸಿದನು. "ಸ್ವರ್ಗದಲ್ಲಿರುವ ನಮ್ಮ ತಂದೆ" ಬಂದು ಬೋಧಿಸಿದ ದೇವದೂತನೆ, "ನಾನು ಮತ್ತು ನನ್ನ ತಂದೆಯೂ ಒಂದೆ" ಎಂದು ಬೋಧಿಸಿದನು. ಆತನಿಗೆ, "ನಾನು ಮತ್ತು ನನ್ನ ತಂದೆ ಒಂದೆ" ಎಂಬ ಭಾವಕ್ಕೆ ಹೋಗಬೇಕಾದರೆ "ಸ್ವರ್ಗದಲ್ಲಿರುವ ತಂದೆ" ಎಂಬ ಭಾವನೆಯ ಮಾರ್ಗದ ಮೂಲಕ ಎಂಬುದು ಗೊತ್ತಿತ್ತು. ಕ್ರೈಸ್ತಧರ್ಮದಲ್ಲಿ ಪ್ರೇಮ ಮತ್ತು ಆಶೀರ್ವಾದವೆ ಇತ್ತು. ಆದರೆ ಎಂದು ಒರಟುತನ ಅದರಲ್ಲಿ ತಲೆ ಹಾಕಿತೋ, ಅಂದು, ಅಧೋಗತಿಗಿಳಿದು, ಅರೇಬಿಯದ ದೇವ ದೂತನ ಧರ್ಮಕ್ಕಿಂತ ಏನೂ ಉತ್ತಮವಾಗಲಿಲ್ಲ. ಈ ಅಲ್ಪಾತ್ಮನಿಗಾಗಿ ಹೋರಾಡುವುದು, ಅದನ್ನೇ ಅಪ್ಪಿಕೊಂಡಿರುವುದು, ಈ ಜನ್ಮದಲ್ಲಿ ಮಾತ್ರವಲ್ಲ, ಸತ್ತ ಮೇಲೆಯೂ ಹಿಂದಿನಂತೆ ಇರಬೇಕೆಂದು ಬಯಸುವುದು ನಿಜವಾಗಿಯೂ ಒರಟುತನ. ಇದನ್ನೆ ಅವರು ನಿಸ್ವಾರ್ಥತೆ ಎಂದು ಸಾರುವುದು, ಧಾರ್ಮಿಕ ತಳಹದಿ ಎನ್ನುವುದು. ಇದು ಧರ್ಮದ ತಳಹದಿಯಾದರೆ ದೇವರು ನಮ್ಮನ್ನು ಕಾಪಾಡಲಿ! ಆದರೆ ಇದೇ ಒಂದು ಆಶ್ಚರ್ಯ. ಇನ್ನೂ ಅಲ್ಪ ಮತಿಗಳಾದ ಪುರುಷರು, ಮತ್ತು ಸ್ತ್ರೀಯರು, ಈ ಅಲ್ಪಾತ್ಮನು ಇಲ್ಲದೇ ಇದ್ದರೆ, ಧರ್ಮವೆಲ್ಲ ನಾಶವಾಗುವುದೆಂದು ತಿಳಿಯುವರು. ಈ ಕ್ಷುದ್ರಾತ್ಮನು ನಾಶವಾದ ಮೇಲೆ ಮಾತ್ರ ಧರ್ಮ ನಿಲ್ಲುವುದಾದರೆ ಅವರು ಸ್ಥಂಬೀಭೂತರಾಗಿ ನಿಲ್ಲುವರು. ಎಲ್ಲಾ ಹಿತಚಿಂತನೆಯ ಮತ್ತು ಧಾರ್ಮಿಕಭಾವನೆಯ ಸಂಕೇತ ಪದವೆ 'ನಾನಲ್ಲ' 'ನೀನು' ಎಂಬುದು. ಸ್ವರ್ಗವಿದೆಯೋ ನರಕ ವಿದೆಯೋ ಯಾರಿಗೆ ಬೇಕು? ಆತ್ಮನಿರುವನೋ ಇಲ್ಲವೋ ಅದರಿಂದ ಏನು? ಶಾಶ್ವತವಾದೊಂದು ವಸ್ತುವಿದೆಯೋ ಇಲ್ಲವೋ ಯಾರಿಗೆ ಬೇಕದು? ನಮ್ಮ ಕಣ್ಣೆದುರಿಗೆ ಪ್ರಪಂಚವಿದೆ. ಅದು ದುಃಖದಿಂದ ತುಂಬಿ ತುಳುಕಾಡುತ್ತಿದೆ. ಬುದ್ಧನಂತೆ ಅದರಲ್ಲಿ ಪ್ರವೇಶಿಸಿ ದುಃಖವನ್ನು ಕಡಿಮೆ ಮಾಡಲು ಪ್ರಯತ್ನಿಸಿ. ಇಲ್ಲದೇ ಇದ್ದರೆ ಆ ಮಹಾ ಪ್ರಯತ್ನದಲ್ಲಿ ನಿಮ್ಮ ಪ್ರಾಣವನ್ನು ಕೊಡಿ. ಮೊದಲು ನಿಮ್ಮನ್ನು ನೀವು ಮರೆಯಿರಿ; ನೀವು ಆಸ್ತಿಕರೋ ನಾಸ್ತಿಕರೋ, ಅಜ್ಞೇಯವಾದಿಗಳೊ ವೇದಾಂತಿಗಳೊ, ಕ್ರೈಸ್ತರೋ ಮಹಮ್ಮದೀಯರೋ, ಯಾರಾದರಾಗಲಿ ಕಲಿಯಬೇಕಾದ ಮೊದಲ ಪಾಠವಿದು. ಮೊದಲು ಕ್ಷುದ್ರಾತ್ಮನ ನಾಶ, ನಂತರ ಅಲ್ಲಿ ನಿಜವಾದ ಆತ್ಮನ ಸ್ಥಾಪನೆ, ಎಲ್ಲರೂ ನಿಸ್ಸಂದೇಹವಾಗಿ ಕಲಿಯಬೇಕಾದ ಬುದ್ಧಿ ವಾದವಿದು.

ಎರಡು ಶಕ್ತಿಗಳು ಒಂದರ ಪಕ್ಕದಲ್ಲಿ ಮತ್ತೊಂದು ಸಮಾನಾಂತರ ದೂರದಲ್ಲಿ ಕೆಲಸಮಾಡುತ್ತಿರುವುದು. ಮೊದಲನೆಯದು ನಾನೆನ್ನುವುದು. ಎರಡನೆಯದು ನಾನಲ್ಲ ಎನ್ನುವುದು. ಈ ಶಕ್ತಿ ಮನುಷ್ಯನಲ್ಲಿ ಮಾತ್ರವಲ್ಲ, ಪ್ರಾಣಿಗಳಲ್ಲೂ ತೋರುವುದು; ಪ್ರಾಣಿಗಳಲ್ಲಿ ಮಾತ್ರವಲ್ಲ ಕ್ಷುದ್ರತಮ ಕೀಟಗಳಲ್ಲಿಯೂ ಇರುವುದು. ಮಾನವನ ಬಿಸಿರಕ್ತವನ್ನು ತನ್ನ ನಖಗಳಿಂದ ಬಗೆವ ಹುಲಿಯು ಕೂಡ ತನ್ನ ಮರಿಗಳ ಸಂರಕ್ಷಣಾರ್ಥವಾಗಿ ತನ್ನ ಪ್ರಾಣವನ್ನು ಬಲಿ ಕೊಡುವುದು. ತನ್ನ ಸಹೋದರನ ಪ್ರಾಣವನ್ನು ಕೂಡ ತೆಗೆಯಲು ಹಿಂಜರಿಯದ ದುರ್ಭಾಗ್ಯನು, ಉಪವಾಸದಿಂದ ನರಳುತ್ತಿರುವ ತನ್ನ ಹೆಂಡತಿ ಮಕ್ಕಳನ್ನು ಸಂರಕ್ಷಿಸಲು ಯಾವ ಅನುಮಾನವೂ ಇಲ್ಲದೆ ಬಹುಶಃ ತನ್ನ ಪ್ರಾಣವನ್ನು ಕೊಡುವನು. ಆದಕಾರಣ ಸೃಷ್ಟಿಯಲ್ಲೆಲ್ಲ ಈ ಎರಡು ಶಕ್ತಿಗಳು ಅಕ್ಕಪಕ್ಕದಲ್ಲಿಯೇ ಕೆಲಸ ಮಾಡುತ್ತಿರುವುದು. ಎಲ್ಲಿ ನೀವು ಒಂದನ್ನು ನೋಡುತ್ತೀರೋ, ಅಲ್ಲಿ ನೀವು ಮತ್ತೊಂದನ್ನು ನೋಡುತ್ತೀರಿ. ಒಂದು ಸ್ವಾರ್ಥತೆ, ಮತ್ತೊಂದು ನಿಸ್ವಾರ್ಥತೆ. ಒಂದು ಆರ್ಜನೆ, ಮತ್ತೊಂದು ತ್ಯಾಗ. ಒಂದು ಸ್ವೀಕರಿಸುವುದು ಮತ್ತೊಂದು ದಾನ ಮಾಡುವುದು. ಕ್ಷುದ್ರತಮ ಕ್ರಿಮಿಯಿಂದ ಹಿಡಿದು ಪವಿತ್ರತಮ ಮಹರ್ಷಿಯ ವರೆಗೆ, ಈ ವಿಶ್ವವೇ ಎರಡು ಶಕ್ತಿಗಳ ಆಟದ ಭೂಮಿ. ಯಾರೂ ಇದನ್ನು ತೋರಬೇಕಾಗಿಲ್ಲ. ಎಲ್ಲರಿಗೂ ಇದು ಸ್ವತಃ ವೇದ್ಯ.

ಇರುವ ಎರಡು ಶಕ್ತಿಗಳಲ್ಲಿ ಯಾವುದೋ ಒಂದರ ಮೇಲೆ ಮಾತ್ರ ತನ್ನ ಕೆಲಸಕ್ಕೆ ತಳಹದಿಯನ್ನು ಮಾಡುವುದಕ್ಕೆ ಮತ್ತು ಪ್ರಪಂಚದ ವಿಕಾಸವನ್ನೇ ವಿವರಿಸುವುದಕ್ಕೆ ಯಾವ ಜನಾಂಗಕ್ಕೆ ಕೋಮಿಗೆ ಅಧಿಕಾರವಿದೆ? ಕಾಮ, ಹೋರಾಟ, ಸ್ಪರ್ಧೆ, ಇವುಗಳೇ ವಿಶ್ವದಲ್ಲಿರುವ ಕ್ರಿಯೆಗೆಲ್ಲ ಮೂಲವೆನ್ನುವುದಕ್ಕೆ ಅವರಿಗೆ ಯಾವ ಅಧಿಕಾರ ವಿರುವುದು? ಈ ಎರಡು ಶಕ್ತಿಗಳೂ ಇವೆ ಎನ್ನುವುದನ್ನು ನಾವು ಅಲ್ಲಗಳೆಯುವುದಿಲ್ಲ. ಆದರೆ ಒಂದಕ್ಕೆ ಮತ್ತೊಂದು ಶಕ್ತಿ ಇಲ್ಲವೆನ್ನುವುದಕ್ಕೆ ಯಾವ ಅಧಿಕಾರವಿದೆ? ಪ್ರೇಮ, ನಾನಲ್ಲವೆನ್ನುವುದು, ತ್ಯಾಗ, ಇವೇ ಪ್ರಪಂಚದಲ್ಲಿರುವ ವಾಸ್ತವಿಕ ಶಕ್ತಿ ಎಂಬುದನ್ನು ಯಾರಾದರೂ ನಿರಾಕರಿಸಬಲ್ಲರೆ? ಮತ್ತೊಂದು ಶಕ್ತಿಯೇ ವಿಮುಖವಾದ ಪ್ರೇಮ. ಪ್ರೇಮವು ಸ್ಪರ್ಧೆಯನ್ನು ತರುವುದು. ಸ್ಪರ್ಧೆಯ ಮೂಲ ಪ್ರೇಮದಲ್ಲಿದೆ. ಪಾಪಕ್ಕೆ ಮೂಲ ತ್ಯಾಗದಲ್ಲಿದೆ. ಪಾಪದಕರ್ತೃವೇ ಪುಣ್ಯ, ಕೊನೆಯ ಗುರಿಯು ಕೂಡ ಪುಣ್ಯವೆ. ದಾರಿ ತಪ್ಪಿದ ಪುಣ್ಯಶಕ್ತಿಯೇ ಪಾಪ. ಇನ್ನೊಬ್ಬನನ್ನು ಖೂನಿ ಮಾಡುವ ಮನುಷ್ಯನಿಗೆ ತನ್ನ ಮಗುವಿನ ಮೇಲಿನ ಪ್ರೇಮ ಬಹುಶಃ ಹಾಗೆ ಮಾಡುವಂತೆ

ಪ್ರೇರೇಪಿಸಸಬಹುದು. ಅವನ ಪ್ರೇಮವು ಪ್ರಪಂಚದಲ್ಲಿರುವ ಕೋಟ್ಯನು ಕೋಟಿ ಮಾನವರನ್ನು ತೊರೆದು ಆ ಮಗು ಒಂದರ ಮೇಲೆ ಕೇಂದ್ರೀ ಕೃತವಾಗಿ ಅಲ್ಪವಾಗಿರುವುದು. ಅಂತವೋ ಅನಂತವೋ ಅದು ಯಾವುದಾದ ರೇನು? ಅಲ್ಲಿರುವುದು ಒಂದೇ, ಅದೇ ಪ್ರೇಮ.

ಆದಕಾರಣ ವಿಶ್ವಪ್ರವರ್ತಕ ಶಕ್ತಿ ಅದು ಯಾವ ರೀತಿಯಲ್ಲಿ ಪ್ರಕಟ ವಾದರೂ, ಅದು ಒಂದು ಅತ್ಯಮೋಘವಾದ ವಸ್ತು, ಅದೇ ನಿಸ್ವಾರ್ಥತೆ, ತ್ಯಾಗ, ಪ್ರೇಮ, ಸತ್ಯ. ಅದೊಂದೆ ವಿಶ್ವದಲ್ಲಿ ಚಿರ ಜಾಗ್ರತ ಶಕ್ತಿ. ಆದಕಾರಣವೆ ವೇದಾಂತಿ ಏಕತ್ವವನ್ನು ಪ್ರತಿಪಾದಿಸುವುದು. ನಾವು ಈ ವಿವರಣೆಯನ್ನು ಪ್ರತಿ ಪಾದಿಸುತ್ತೇವೆ. ಏಕೆಂದರೆ ಪ್ರಪಂಚಕ್ಕೆ ಎರಡು ಕಾರಣವನ್ನು ಒಪ್ಪಲಾರೆವು. ಆ ಸುಂದರ ಅತ್ಯಮೋಘ ಪ್ರೇಮ, ಮಿತಿಗೊಳಗಾಗಿ ಪಾಪದಂತೆ ಕ್ರೌರ್ಯದಂತೆ, ಕಾಣುವುದೆಂದು ಒಪ್ಪಿಗೊಂಡರೆ, ಪ್ರೇಮಶಕ್ತಿ ಒಂದರಿಂದ ಪ್ರಪಂಚವನ್ನೆಲ್ಲ ವಿವರಿಸಿದಂತೆ ಆಗುತ್ತದೆ. ಇಲ್ಲದೇ ಇದ್ದರೆ ಪ್ರಪಂಚಕ್ಕೆ ಎರಡು ಕಾರಣಗಳಿವೆ ಎಂಬುದನ್ನು ನಾವು ಒಪ್ಪಬೇಕಾಗುತ್ತದೆ. ಅದೇ ಒಂದು ಪಾಪ, ಒಂದು ಪುಣ್ಯ, ಒಂದು ಪ್ರೇಮ, ಮತ್ತೊಂದು ದ್ವೇಷ. ಯಾವುದು ಹೆಚ್ಚು ಯುಕ್ತಿ ಪೂರಿತ ವಾದುದು? ನಿಜವಾಗಿಯೂ ಏಕ ಶಕ್ತಿಯ ಸಿದ್ಧಾಂತ.

ಇನ್ನು ಬಹುಶಃ ದ್ವೈತಕ್ಕೆ ಸೇರದ ವಿಷಯಗಳನ್ನಾಲೋಚಿಸಲು ಮುಂದು ವರಿಯೋಣ. ಅವರೊಂದಿಗೆ ನಾನು ಧೀರ್ಘಕಾಲವಿರಲಾರೆನು. ಅದಕ್ಕೆ ಅಂಜುವೆನು. ಧರ್ಮ, ತ್ಯಾಗದ ಮಹೋತ್ತಮ ಆದರ್ಶ, ಅತಿಗಹನವಾದ ತತ್ತ್ವ ಸಿದ್ಧಾಂತದೊಂದಿಗೆ ಹೋಗಬಲ್ಲದೆಂಬುದನ್ನು ತೋರುವುದೇ ನನ್ನ ಉದ್ದೇಶ. ಧರ್ಮ ಮತ್ತು ನೀತಿಗೋಸುಗ ನಿಮ್ಮ ತತ್ತ್ವವನ್ನು ಕೆಳಗೆ ಇಳಿಸಬೇಕಾಗಿಲ್ಲ. ಆದರೆ ಧರ್ಮ ಮತ್ತು ನೀತಿಯು ನಿಜವಾದ ತಳಹದಿ ಸಿಕ್ಕಬೇಕಾದರೆ ಅತ್ಯುತ್ತಮ ತತ್ತ್ವ ಮತ್ತು ವೈಜ್ಞಾನಿಕ ಸಿದ್ಧಾಂತ ಬೇಕಾಗಿವೆ. ಮಾನವನ ಜ್ಞಾನವು ಮಾನವನ ಯೋಗಕ್ಷೇಮಕ್ಕೆ ವಿರೋಧವಾಗಿಲ್ಲ. ಅದಲ್ಲದೆ ಜೀವನದ ಎಲ್ಲಾ ಕಾರ್ಯಕ್ಷೇತ್ರಗಳಲ್ಲಿ ನಮ್ಮನ್ನು ಕಾಪಾಡುವುದು ಜ್ಞಾನವೊಂದೆ—ಜ್ಞಾನದಲ್ಲೆ ಪೂಜೆ ಇದೆ. ಹೆಚ್ಚು ನಮಗೆ ತಿಳಿದಷ್ಟು ಅದರಿಂದ ನಮಗೆ ಒಳ್ಳೆಯದು. ತೋರಿಕೆಗೆ ಪಾಪದಂತೆ ಕಾಣುವಂತೆ ಮಾಡುವುದಕ್ಕೆ ಕಾರಣವೆ, ಅನಂತವನ್ನು ಅಂತವಾಗಿ ಮಾಡುವ ಪ್ರಯತ್ನ ಎಂದು ವೇದಾಂತ ಸಾರುತ್ತದೆ. ಸಣ್ಣ ಸಣ್ಣ ಕಾಲುವೆಯೊಳಗೆ ಹೋಗಿ ಸಾಂತವಾಗಿ ಪಾಪದಂತೆ ತೋರುವ ಪ್ರೇಮವೆ, ಕ್ರಮೇಣ ಮತ್ತೊಂದು ಕಡೆ ಯಿಂದ ಮುಕ್ತವಾಗಿ ದೇವರಂತೆ ಪ್ರಕಾಶಿಸುವುದು. ಈ ಎಲ್ಲಾ ತೋರಿಕೆಯ

ಪಾಪಕ್ಕೆ ಕಾರಣ ನಮ್ಮಲ್ಲಿಯೇ ಇರುವುದೆಂದು ವೇದಾಂತ ಹೇಳುವುದು. ಯಾವ ಅತಿಪ್ರಾಕೃತ ದೇವತೆಗಳನ್ನೂ ದೂರಬೇಡಿ. ಆದರೂ ನಿರಾಶರಾಗಬೇಕಾಗಿಲ್ಲ; ಅಥವಾ ಯಾರಾದರೂ ಬಂದು ನಮ್ಮ ಸಹಾಯಕ್ಕೆ ಕೈಯೆತ್ತಿದ ಹೊರತು ಮುಕ್ತ ರಾಗುವುದಕ್ಕೆ ಸಾಧ್ಯವಿಲ್ಲವೆನ್ನುವ ಸ್ಥಳದಲ್ಲಿ ಇರುವೆವು ಎಂದು ಯೋಚಿಸಬೇಡಿ. ಹಾಗೆಂದಿಗೂ ಇಲ್ಲ. ನಾವು ರೇಷ್ಮೆಯ ಹುಳುವಿನಂತೆ ಇರುವೆವು. ನಮ್ಮ ಸತ್ವ ದಿಂದಲೇ ನಾವು ನೂಲನ್ನು ಎಳೆಯುವೆವು, ಗೂಡನ್ನು ಹೆಣೆಯುವೆವು, ಕಾಲ ಕ್ರಮದಲ್ಲಿ ಅದರಲ್ಲಿ ಬಂಧಿತರಾಗುವೆವು. ಆದರೆ ಇದು ಎಂದೆಂದಿಗೂ ಇರುವುದಿಲ್ಲ. ನಾವು ಆಧ್ಯಾತ್ಮಿಕ ಅನುಭವವನ್ನು ಆ ಗೂಡಿನಲ್ಲಿ ಪಡೆದು ಮುಕ್ತರಾಗಿ ಚಿಟ್ಟೆ ಯಂತೆ ಹೊರಗೆ ಬರುವೆವು. ಈ ಕರ್ಮದ ಬಲೆಯನ್ನು ನಾವೆ ನಮ್ಮ ಸುತ್ತಲೂ ಹೆಣೆದು ಕೊಂಡಿರುವೆವು. ಅಜ್ಞಾನದಿಂದ ನಾವು ಬದ್ಧರೆಂದು ಭ್ರಮಿಸಿ ಸಹಾಯ ಕ್ಕೆಂದು ಕಂಬನಿಗರೆದು ಅಳುವೆವು. ಆದರೆ ಸಹಾಯ ಹೊರಗಿನಿಂದ ಬರುವು ದಿಲ್ಲ. ಅದು ನಮ್ಮಿಂದಲೇ ಬರುವುದು. ಪ್ರಪಂಚದಲ್ಲಿರುವ ದೇವರಿಗೆಲ್ಲ ಗೋಳಿಡಿ. ನಾನೂ ಅನೇಕ ವರುಷಗಳು ಗೋಳಿಟ್ಟೆ. ನನಗೆ ಸಹಾಯ ಕೊನೆಗೆ ದೊರಕಿತು. ಆದರೆ ಆ ಸಹಾಯ ಬಂದುದು ನನ್ನಿಂದಲೆ. ಭ್ರಾಂತಿಯಿಂದ ನಾನು ಏನನ್ನು ಮಾಡಿದ್ದೆನೋ ಅದನ್ನು ಬಿಡಬೇಕಾಯಿತು. ಅದೊಂದೇ ದಾರಿ. ನನ್ನ ಸುತ್ತಲೂ ಬೀಸಿಕೊಂಡಿರುವ ಬಲೆಯನ್ನು ನಾನೇ ಕತ್ತರಿಸಬೇಕಾಯಿತು. ಇದನ್ನು ಮಾಡುವುದಕ್ಕೆ ಶಕ್ತಿ ನಮ್ಮಲ್ಲಿಯೇ ಇರುವುದು. ಸನ್ಮಾರ್ಗದಲ್ಲಿಯೋ ಅಥವಾ ದುರ್ಮಾರ್ಗದಲ್ಲಿಯೋ ಹೋದ ನನ್ನ ಯಾವ ಆಶಯವೂ ವ್ಯರ್ಥ ವಾಗಿಲ್ಲವೆಂಬುದು ನಿಸ್ಸಂಶಯವಾಗಿದೆ. ಆದರೆ ನನ್ನ ಪೂರ್ವ ಪಾಪ ಪುಣ್ಯಗಳ ಕರ್ಮದ ಪ್ರತಿಫಲ ನಾನು. ನಾನು ಜೀವನದಲ್ಲಿ ಎಷ್ಟೋ ತಪ್ಪನ್ನು ಮಾಡಿರು ವೆನು. ಆದರೆ ಇದನ್ನು ಜ್ಞಾಪಕದಲ್ಲಿಡಿ. ಹಿಂದಿನ ಯಾವ ಒಂದು ತಪ್ಪೂ ಇಲ್ಲದೆ ನಾನು ಇಂದಿನಂತೆ ಆಗುತ್ತಿರಲಿಲ್ಲ. ಆದಕಾರಣ ಹಾಗೆ ತಪ್ಪನ್ನು ಮಾಡಿ ದುದು ನನಗೆ ಸಮಾಧಾನಕರವಾಗಿದೆ. ನೀವು ಮನೆಗೆ ಹೋಗಿ ಬೇಕೆಂದು ತಪ್ಪು ಗಳನ್ನು ಮಾಡಿ ಎಂದು ನಿಮಗೆ ಹೇಳುವುದಿಲ್ಲ. ಈ ರೀತಿಯಲ್ಲಿ ನನ್ನನ್ನು ತಪ್ಪು ತಿಳಿದುಕೊಳ್ಳಬೇಡಿ. ಹಿಂದೆ ಮಾಡಿದ ತಪ್ಪಿಗಾಗಿ ಸಪ್ಪೆ ಮುಖ ಹಾಕಿಕೊಳ್ಳ ಬೇಡಿ. ಕೊನೆಗೆ ಎಲ್ಲವೂ ಸರಿಯಾಗುವುದೆಂದು ತಿಳಿಯಿರಿ. ಹಾಗಲ್ಲದೆ ಬೇರೆ ಆಗ ಲಾರದು. ಏಕೆಂದರೆ ಒಳ್ಳೆಯದೇ ನಮ್ಮ ಸ್ವಭಾವ. ಪವಿತ್ರತೆ ನಮ್ಮ ಸ್ವಭಾವ. ಸ್ವಭಾವವನ್ನು ಎಂದಿಗೂ ನಾವು ನಾಶಮಾಡುವುದಕ್ಕೆ ಆಗುವುದಿಲ್ಲ. ನಮ್ಮ ಮೂಲ ಸ್ವಭಾವ ಯಾವಾಗಲೂ ಒಂದೇ ಸಮನಾಗಿರುವುದು.

ನಾವು ತಿಳಿದುಕೊಳ್ಳಬೇಕಾಗಿರುವುದು ಇದು: ನಾವು ಯಾವುದನ್ನು ತಪ್ಪು ಮತ್ತು ಪಾಪವೆನ್ನುವೆವೋ ಅದನ್ನು ನಾವು ಬಲಹೀನರಾಗಿರುವುದರಿಂದ ಮಾಡುತ್ತೇವೆ. ನಾವು ಅಜ್ಞಾನಿಗಳಾದ ಕಾರಣವೆ ಬಲಹೀನರಾಗಿರುವುದು. ಅವನ್ನು ತಪ್ಪೆಂದು ಕರೆಯುವುದೂ ಒಳ್ಳೆಯದು. ಪಾಪವೆಂಬ ಪದ ಹಿಂದಿನ ಕಾಲದಲ್ಲಿ ಬಹಳ ಒಳ್ಳೆಯ ಪದವಾಗಿ ಕಂಡರೂ, ನನಗೆ ಅಂಜಿಕೆಯಾಗುವ ಯಾವುದೋ ಒಂದು ಸಹವಾಸ ಇದೆ ಇದಕ್ಕೆ. ನಮ್ಮನ್ನು ಯಾರು ಅಜ್ಞಾನಿಗಳನ್ನಾಗಿ ಮಾಡುತ್ತಾರೆ? ನಾವೆ ನಮ್ಮ ಕಣ್ಣಿನ ಮೇಲೆ ಕೈ ಇಟ್ಟುಕೊಂಡು ಕತ್ತಲೆ ಎಂದು ಅಳುತ್ತೇವೆ. ಕೈಗಳನ್ನು ತೆಗೆಯಿರಿ. ಬೆಳಕು ಅಲ್ಲೇ ಇರುವುದು. ಆತ್ಮದ ಸ್ವಯಂ ಜ್ಯೋತಿಯ ಬೆಳಕು ಯಾವಾಗಲೂ ನಮಗೆ ಇದ್ದೇ ಇರುವುದು. ನಿಮ್ಮ ಆಧುನಿಕ ವಿಜ್ಞಾನಿಗಳು ಏನೆನ್ನುತ್ತಾರೆ ನಿಮಗೆ ತಿಳಿಯದೆ? ವಿಕಾಸಕ್ಕೆ ಕಾರಣವೇನು? ಆಸೆ. ಪ್ರಾಣಿಯು ಏನನ್ನೋ ಮಾಡಬೇಕೆಂದು ಇಚ್ಛಿಸುವುದು. ಆದರೆ ವಾತಾವರಣ ಸರಿಯಾಗಿಲ್ಲ. ಆದಕಾರಣ ಹೊಸ ದೇಹವನ್ನು ಪಡೆಯುತ್ತದೆ. ಹೊಸ ದೇಹಕ್ಕೆ ಕಾರಣ ಯಾವುದು? ಪ್ರಾಣಿಯೆ. ಅದರ ಇಚ್ಛೆಯೆ ಕಾರಣ. ಕ್ಷುದ್ರತಮ ಅಣುವಿನಿಂದ ನೀವು ವಿಕಾಸ ಹೊಂದಿರುವಿರಿ. ನಿಮ್ಮ ಚಿತ್ ಶಕ್ತಿಯನ್ನು ಪ್ರಯೋಗಿಸಿ. ಅದು ನಿಮ್ಮನ್ನು ಇನ್ನೂ ಮೇಲೆ ಕರೆದೊಯ್ಯುವುದು. ಚಿತ್ ಶಕ್ತಿ ಸರ್ವಶಕ್ತಿಮಾನ್. ಅದು ಸರ್ವಶಕ್ತವಾದರೆ ನಾನು ಎಲ್ಲವನ್ನು ಏಕೆ ಮಾಡಬಾರದೆನ್ನಬಹುದು. ಕ್ಷುದ್ರತಮ ಕೀಟದ ಸ್ಥಿತಿಯಿಂದ ಹಿಡಿದು ಮಾನವ ಜನ್ಮದವರೆವಿಗೂ ಆದ ನಿಮ್ಮ ವಿಕಾಸವನ್ನು ನೀವೆ ಪರಿಗಣಿಸಿ. ಈ ಅವಸ್ಥೆಗಳನ್ನೆಲ್ಲ ಮಾಡಿದವರಾರು? ನಿಮ್ಮ ಚಿತ್ ಶಕ್ತಿಯೆ. ಹಾಗಾದರೆ ಅದು ಸರ್ವಶಕ್ತಿ ಮಾನ್ ಎಂಬುದನ್ನು ನಿರಾಕರಿಸುವಿರಾ ನೀವು? ಇಷ್ಟು ಮೇಲಿನ ಸ್ಥಿತಿಯವರೆವಿಗೂ ಬರುವಂತೆ ಮಾಡಿದುದು ಇದಕ್ಕಿಂತಲೂ ಮೇಲೆ ಹೋಗುವಂತೆ ಮಾಡಬಲ್ಲದು. ನಿಮಗೆ ಬೇಕಾಗಿರುವುದು ಚಿತ್ ಶಕ್ತಿಯನ್ನು ವೃದ್ಧಿಗೊಳಿಸುವ ಶೀಲ.

ನಿಮ್ಮ ಸ್ವಭಾವ ಕೆಟ್ಟದ್ದು; ನೀವು ಮನೆಗೆ ಹೋಗಿ ಹರಕು ಬಟ್ಟೆ ಹಾಕಿಕೊಂಡು, ಮೈಗೆ ಬೂದಿ ಬಳಿದುಕೊಂಡು, ಬದುಕಿರುವತನಕ ಕುಳಿತು ಅಳಬೇಕು. ಏಕೆಂದರೆ ಹಿಂದೆ ನೀವು ಕೆಲವು ವೇಳೆ ತಪ್ಪುದಾರಿ ಹಿಡಿದಿರಿ ಎಂದು ಉಪದೇಶಿಸಿದರೆ ನಿಮಗೆ ಯಾವ ವಿಧವಾದ ಸಹಾಯವೂ ಆಗುವುದಿಲ್ಲ. ಅಲ್ಲದೆ ನಿಮ್ಮನ್ನು ಮತ್ತೂ ಬಲಹೀನರನ್ನಾಗಿ ಮಾಡಲು ದಾರಿ ತೋರುವೆನು. ಸಾವಿರಾರು ವರುಷಗಳಿಂದ ಈ ಕೋಣೆಯಲ್ಲಿ ಕತ್ತಲೆ ಕವಿದಿದ್ದರೆ ನೀವು ಬಂದು "ಅಯ್ಯೋ ಕತ್ತಲೆ" ಎಂದು ಗೋಳಾಡಿದರೆ ಕತ್ತಲೆ ಹೋಗುವುದೆ? ಒಂದು ಬೆಂಕಿಯ

ಕಡ್ಡಿಯನ್ನು ಗೀರಿದರೆ ಬೆಳಕು ತಕ್ಷಣವೇ ಬರುವುದು. "ಅಯ್ಯೋ ನಾನು ಪಾಪ ಮಾಡಿರುವೆ; ಅನೇಕ ತಪ್ಪುಗಳನ್ನು ಮಾಡಿರುವೆ" ಎಂದು ನೀವು ಬದುಕಿರುವ ತನಕ ಆಲೋಚಿಸುತ್ತಿದ್ದರೆ ಅದರಿಂದ ಏನು ಒಳ್ಳೆಯದಾಗುವುದು? ಪಾಪಿಗಳೆಂದು ನಮಗೆ ಹೇಳಲು ಯಾವ ಭೂತವು ಬೇಕಾಗಿಲ್ಲ. ಜ್ಞಾನ ಜ್ಯೋತಿಯನ್ನು ತಂದರೆ ಪಾಪ ಮರುಕ್ಷಣವೆ ಮಾಯವಾಗುವುದು. ಮೊದಲು ನಿಮ್ಮ ನಡತೆಯನ್ನು ತಿದ್ದುಕೊಳ್ಳಿ. ನಿತ್ಯಶುದ್ಧವಾದ, ಪ್ರಕಾಶಮಾನವಾದ, ನಿಮ್ಮ ಸ್ವಯಂಜ್ಯೋತಿಯನ್ನು ವ್ಯಕ್ತಗೊಳಿಸಿ. ನೀವು ನೋಡುವ ಎಲ್ಲರಲ್ಲಿಯೂ ಅದು ವ್ಯಕ್ತವಾಗುವಂತೆ ಮಾಡಿ. ಅತಿ ಪಾಪಾತ್ಮನ ಅಂತರಾಳದಲ್ಲಿಯೂ ಇರುವ ಪರಿಶುದ್ಧಾತ್ಮನ ಸ್ಥಿತಿಗೆ ನಾವೆಲ್ಲರೂ ಬಂದಿದ್ದರೆ, ಅವನನ್ನು ನೋಡಿ ನಿಂದಿಸುವ ಬದಲು, "ಹೇ ಸ್ವಯಂ ಪ್ರಕಾಶಾತ್ಮನೆ ಜಾಗ್ರತನಾಗು! ಹೇ, ನಿತ್ಯ ಶುದ್ಧನೆ ಏಳು! ಜನನ ಮರಣಾತೀತನೆ ಏಳು! ಸರ್ವಶಕ್ತನೆ ಏಳು! ನಿನ್ನ ನೈಜಸ್ವಭಾವವನ್ನು ವ್ಯಕ್ತಪಡಿಸು. ಈ ಕ್ಷುದ್ರರೂಪುಗಳು ನಿನಗೆ ತರವಲ್ಲ" ಎನ್ನಬಹುದಾಗಿತ್ತು. ಅದ್ವೈತಿ ಬೋಧಿಸುವ ಅತ್ಯುತ್ತಮ ಪ್ರಾರ್ಥನೆಯೆ ಇದು. ನಮ್ಮಲ್ಲಿ ಅನವರತವೂ ಇರುವ ಅಂತರಾತ್ಮನ ನಿಜಸ್ವಭಾವವನ್ನು ಮರೆಯದಿರುವುದು, ಯಾವಾಗಲೂ ಅದನ್ನು ಅನಂತವೆಂತಲೂ ಸರ್ವಶಕ್ತಿಮಾನ್ ಎಂತಲೂ, ನಿತ್ಯ ಶುದ್ಧನು, ನಿತ್ಯೋಪಕಾರಿಯು, ನಿಸ್ವಾರ್ಥನು, ಸರ್ವ ಉಪಾದಿ ವರ್ಜಿತನು ಎಂದು ತಿಳಿಯುವುದು. ಅದರ ಸ್ವಭಾವವು ಸ್ವಾರ್ಥ ಹೀನವಾದ ಕಾರಣ ಅದು ಬಲಾಢ್ಯವಾದುದು, ನಿರ್ಭಯವಾದುದು. ಏಕೆಂದರೆ ಅಂಜಿಕೆ ಬರುವುದು ಸ್ವಾರ್ಥತೆಗೆ ಮಾತ್ರ. ತನಗೋಸುಗವಾಗಿ ಯಾರು ಏನನ್ನೂ ಆಶಿಸುವುದಿಲ್ಲವೋ, ಅವನು ಅಂಜುವುದು ಯಾರಿಗೆ? ಅವನನ್ನು ಅಂಜಿಸುವುದು ಯಾವುದು? ಅವನಿಗೆ ಸಾವಿನಿಂದ ಯಾವ ಭಯ? ಪಾಪದಿಂದ ಯಾವ ಭಯ? ನಾವು ಅದ್ವೈತಿಗಳಾದರೆ ಈಕ್ಷಣದಿಂದಲೇ ನಮ್ಮ ಹಳೆಯ ಅಹಂಕಾರ ಮಾಯವಾಗಿ ಹೋಯಿತು ಎಂದು ಆಲೋಚಿಸಬೇಕು. ಹಳೆಯ ಶ್ರೀಮಾನ್ ಶ್ರೀಮತಿ, ಕುಮಾರಿ, ಮುಂತಾದುವುಗಳೆಲ್ಲ ಹೋಯಿತು. ಅವುಗಳೆಲ್ಲ ಮೂಢನಂಬಿಕೆಗಳಾಗಿತ್ತು. ಉಳಿಯುವುದೇ, ನಿತ್ಯಶುದ್ಧವಾದ ಅಪೌರುಷೇಯವಾದ ಸರ್ವಶಕ್ತ ಮತ್ತು ಸರ್ವಜ್ಞ. ನಂತರ ಎಲ್ಲಾ ಅಂಜಿಕೆಗಳೂ ಅದರಿಂದ ಪಲಾಯನ ವಾಗುವುವು. ಸರ್ವಾಂತರ್ಯಾಮಿಯನ್ನು ಯಾರು ಪ್ರೀತಿಸಬಲ್ಲರು. ನಮ್ಮಲ್ಲಿರುವ ಬಲಹೀನತೆಯೆಲ್ಲ ಮಾಯೆ. ನಮ್ಮ ಸಹೋದರರಲ್ಲಿ ಈ ಆತ್ಮಜ್ಞಾನವನ್ನು ಎಚ್ಚರಗೊಳಿಸುವುದೊಂದೆ ನಮ್ಮ ಕೆಲಸ. ಅವರೂ ಕೂಡ ಅದೇ ಮುಕ್ತಾತ್ಮರೆಂದು

ನಮಗೆ ಕಾಣುತ್ತದೆ. ಆದರೆ ಅವರಿಗೆ ಅದು ಗೊತ್ತಿಲ್ಲ. ನಾವು ಅವರಿಗೆ ಇದನ್ನು ಬೋಧಿಸಬೇಕು. ಅವರ ಅನಂತಾತ್ಮವನ್ನು ಜಾಗ್ರತ ಗೊಳಿಸುವುದಕ್ಕೆ ನಾವು ಸಹಾಯ ಮಾಡಬೇಕು. ಇದೆ ಇಡೀ ಪ್ರಪಂಚದಲ್ಲೆಲ್ಲಾ ಅತ್ಯಾವಶ್ಯಕ ವಾದುದೆಂದು ನನಗೆ ಕಾಣುತ್ತದೆ. ಈ ಸಿದ್ಧಾಂತ ಬಹಳ ಪುರಾತನವಾದುದು. ಇರುವ ಅನೇಕ ಪರ್ವತಗಳಿಗಿಂತಲೂ ಬಹುಶಃ ಹಳೆಯದು. ಸತ್ಯವೆಲ್ಲ ನಿತ್ಯ ವಾದುದು. ಸತ್ಯ ಯಾರ ಸ್ವಂತ ಆಸ್ತಿಯೂ ಅಲ್ಲ. ಯಾವ ಜನಾಂಗವೇ ಆಗಲೀ, ಯಾವ ವ್ಯಕ್ತಿಯೇ ಆಗಲೀ, ಪ್ರತ್ಯೇಕವಾಗಿ ತನ್ನ ಹಕ್ಕನ್ನು ಅದಕ್ಕೆ ಸ್ಥಾಪಿಸಲಾರದು. ಎಲ್ಲಾ ಜೀವಿಗಳ ನೈಜ ಸ್ವಭಾವವೇ ಸತ್ಯ. ಅದಕ್ಕೋಸುಗ ಯಾರು ಪ್ರತ್ಯೇಕವಾದ ಹಕ್ಕನ್ನು ಸ್ಥಾಪಿಸಬಲ್ಲರು? ಆದರೆ ಅದನ್ನು ಅನುಷ್ಠಾನದಲ್ಲಿ ಬರುವಂತೆ ಮಾಡಬೇಕು. ಅದನ್ನು ಸುಲಭವಾಗಿ ತಿಳಿಯುವಂತೆ ಮಾಡಬೇಕು. ಉತ್ತಮಸತ್ಯ ಯಾವಾಗಲೂ ಅತಿಸುಲಭ. ಸಮಾಜದ ಅಂಗಾಂಗಗಳಲ್ಲಿ ಪ್ರವಹಿಸುವಂತೆ ಆಗಬೇಕು. ಪ್ರೌಢಪಂಡಿತರ ಮತ್ತು ಪಾಮರರ, ಪುರುಷರ ಮತ್ತು ಸ್ತ್ರೀಯರ, ಅಬಾಲವೃದ್ಧರ ಸರ್ವ ಸಾಮಾನ್ಯ ಆಸ್ತಿಯಾಗಬೇಕು. ತರ್ಕಶಾಸ್ತ್ರದ ಶಾಖೋಪಶಾಖೆ, ತತ್ತ್ವಶಾಸ್ತ್ರದ ಸಿದ್ಧಾಂತದ ಹೊರೆ, ಪುರಾಣ, ಮತ್ತು ಬಾಹ್ಯಾಚಾರ ನಿಯಮಗಳು ಅದರ ಕಾಲದಲ್ಲಿ ಚೆನ್ನಾಗಿದ್ದಿರಬಹುದು. ಅದರೆ ವಿಷಯವನ್ನು ಸುಲಭಗ್ರಾಹ್ಯವಾಗಿ ಮಾಡಲು ಪ್ರಯತ್ನಿಸುವ. ಪ್ರತಿಜೀವರಲ್ಲಿರುವ ಸತ್ಯವೇ ಪೂಜಾವಸ್ತುವಾಗಿ, ಪ್ರತಿಮಾನವನೂ ಉಪಾಸಕನಾಗುವ ಪುಣ್ಯಯುಗ ಉದಯಿಸುವಂತೆ ಮಾಡುವ.



ಬೆಂಗಳೂರು ಪ್ರೆಸ್, ಮೈಸೂರು ಬ್ರಾಂಚ್‌ನಲ್ಲಿ ಮುದ್ರಿಸಲ್ಪಟ್ಟಿತು.

# ಶ್ರೀ ರಾಮಕೃಷ್ಣಾಶ್ರಮದ ಪ್ರಕಟಣೆಗಳು, ಮೈಸೂರು.

| | | | |
|---|---|---|---|
| ಶ್ರೀ ರಾಮಕೃಷ್ಣ ಉಪದೇಶಾಮೃತ .. .. .. | ೩ | ೮ | ೦ |
| ಸ್ವಾಮಿ ವಿವೇಕಾನಂದ (ಕುವೆಂಪು) .. .. | ೩ | ೮ | ೦ |
| ಪತ್ರಮಾಲೆ .. .. .. .. | ೩ | ೦ | ೦ |
| ಶ್ರೀ ಶಾರದಾದೇವಿ .. .. .. | ೨ | ೦ | ೦ |
| ಶ್ರೀ ಶಾರದಾದೇವಿ ಸಂಭಾಷಣೆ .. .. | ೨ | ೮ | ೦ |
| ಶ್ರೀ ರಾಮಕೃಷ್ಣ .. .. .. | ೧ | ೮ | ೦ |
| ರಾಜಯೋಗ .. .. .. | ೨ | ೧೦ | ೦ |
| ಕರ್ಮಯೋಗ .. .. .. | ೧ | ೮ | ೦ |
| ಭಕ್ತಿಯೋಗ .. .. .. | ೧ | ೦ | ೦ |
| ತ್ರಿವೇಣೀ (ಶ್ರೀ ರಾಮಕೃಷ್ಣ, ಸ್ವಾಮಿ ವಿವೇಕಾನಂದ, ಶಾರದಾದೇವಿ ಸಂಕ್ಷಿಪ್ತ ಜೀವನ) .. .. | ೧ | ೦ | ೦ |
| ಶ್ರೀ ಗುರುದೇವರ ವಚನ .. .. .. | ೧ | ೦ | ೦ |
| ಬ್ರಹ್ಮಾನಂದ ವಚನ ಸುಧೆ .. .. .. | ೧ | ೪ | ೦ |
| ಶ್ರೀ ರಾಮಕೃಷ್ಣ ಉಪನಿಷತ್ .. .. | ೧ | ೪ | ೦ |
| ಪರಿವ್ರಾಜಕ .. .. .. | ೧ | ೪ | ೦ |
| ಪ್ರಾಚ್ಯ ಮತ್ತು ಪಾಶ್ಚಾತ್ಯ .. .. .. | ೧ | ೪ | ೦ |
| ವಿದ್ಯಾಭ್ಯಾಸ .. .. .. | ೦ | ೧೦ | ೦ |
| ಹಿಂದೂ ಧರ್ಮಸಾರ .. .. .. | ೦ | ೧೦ | ೦ |
| ವರ್ತಮಾನ ಭಾರತ .. .. .. | ೦ | ೧೦ | ೦ |
| ವಿವೇಕವಾಣಿ .. .. .. | ೦ | ೧೦ | ೦ |
| ನನ್ನ ಗುರುದೇವ .. .. .. | ೦ | ೮ | ೦ |
| ಚಿಕಾಗೋ ಉಪನ್ಯಾಸ .. .. .. | ೦ | ೬ | ೦ |
| ಮುಮುಕ್ಷು ಲಕ್ಷಣ .. .. .. | ೦ | ೪ | ೦ |
| ನನ್ನ ಜೀವನ ಮತ್ತು ಧ್ಯೇಯ .. .. | ೦ | ೪ | ೦ |
| ಈಶ್ವರಾನುರಾಗ .. .. .. | ೦ | ೪ | ೦ |
| ನೊಂದ ಜೀವಕ್ಕೆ ಭರವಸೆ .. .. .. | ೦ | ೪ | ೦ |
| ಭಾರತ ಮಹಿಳೆ .. .. .. | ೦ | ೪ | ೦ |
| ಕರ್ಮರಹಸ್ಯ .. .. .. | ೦ | ೪ | ೦ |
| ಸಾಧನ .. .. .. .. | ೦ | ೪ | ೦ |
| ಅಮರನಾಥ ಯಾತ್ರೆ .. .. .. | ೧ | ೦ | ೦ |
| ಅನುಷ್ಠಾನ ವೇದಾಂತ .. .. .. | ೧ | ೦ | ೦ |
| ಪರಮಾರ್ಥ ಪ್ರಸಂಗ .. .. .. | ೨ | ೦ | ೦ |